# ಕೊಡಗು ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾವಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 12 ಜೂನ್ 15 ರಿಂದ 30–1998 ಪುಟಗಳು : 24 ರೂ. 5





## ಭೂಲೋಕಕ್ಕೆ ವರದಾನವಾದ ಗ್ರೀಷ್ಮಾಯನ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
180/ಎ, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 516771

**ಮಡಿಕೇರಿಯ ನಮ್ಮ ವಿಳಾಸ**

**ಕೊಡಗು ಸಂಗಾತಿ**
C/o ನಂಗಾರ್ ಆಡಿಯೋ ವೀಡಿಯೊ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201


## ಒಳನೋಟ

ಪುಟಗಳು



### ಅರೆ ಭಾಷೆರ ವಿಭಾಗ



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ವಿದ್ಯಾವಂತರ ವಲಸೆ

ಪ್ರಾಚೀನ ಕಾಲದಲ್ಲಿ ಮನುಷ್ಯ ಅಲೆಮಾರಿ ಜೀವನ ವನ್ನು ವ್ಯವಸಾಯ ಮಾಡುವ ಹಂತದವರೆಗೆ ನಡೆಸುತ್ತಿದ್ದ. ಆದರೆ ಮನುಷ್ಯ ವ್ಯವಸಾಯದಿಂದ ಜೀವನ ಮಾಡಲು ಕಲಿತ ನಂತರ ಒಂದೇ ಸ್ಥಳದಲ್ಲಿ ನೆಲಸಿ ಜೀವಿಸುವುದನ್ನು ಕಲಿತರೂ ಪರಕೀಯರ ಧಾಳಿ, ಯುದ್ಧ, ಕ್ಷಾಮಗಳಿಂದಾಗಿ ತಾನು ನೆಲೆ ನಿಂತ ಸ್ಥಳದಿಂದ ಸುಭದ್ರವಾದ ನೆಲೆಯನ್ನು ಹುಡುಕಿಕೊಂಡು ನೆಲೆಸುವ ಪರಿಸ್ಥಿತಿ ಇತ್ತು. ನಾಗರೀಕತೆ ಬೆಳೆದಂತೆಲ್ಲಾ ಉದ್ಯೋಗ, ವ್ಯಾಪಾರಕ್ಕಾಗಿ ತನ್ನ ಜೀವನವನ್ನು ನಿರೂಪಿಸುವುದಕ್ಕಾಗಿ ಊರಿನಿಂದ ಊರಿಗೆ, ದೇಶದಿಂದ ದೇಶಕ್ಕೆ ವಲಸೆ ಹೋಗುವುದು ಸಾಮಾನ್ಯವಾಗಿದೆ.

ಇತ್ತೀಚೆಗಿನ ದಿನಗಳಲ್ಲಿ ವಿದ್ಯಾವಂತರು ಅದರಲ್ಲೂ ವೈದ್ಯಕೀಯ, ಇಂಜಿನಿಯರಿಂಗ್, ವಿಜ್ಞಾನ ಓದಿದವರು ಇಂಗ್ಲೆಂಡ್, ಅಮೇರಿಕ, ಕೆನಡಾ ಮತ್ತು ಇತರ ದೇಶಗಳಿಗೆ ಹೋಗಿ ನೆಲೆಸಿ ಅಲ್ಲಿಯ ಪ್ರಜೆಗಳೇ ಆಗಿ ಹೋಗಿದ್ದಾರೆ. ಅವರ ಮಕ್ಕಳು ಭಾರತೀಯ ಸಂಪ್ರದಾಯ, ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಭಾರತೀಯರೆಲ್ಲರೂ ಸೇರಿ ಹೋದಲ್ಲಿ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ತಮ್ಮದೇ ಆದ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿ ತಮ್ಮ ಮುಂದಿನ ಪೀಳಿಗೆಗೆ ಸಂಸ್ಕೃತಿ ಬಗ್ಗೆ ಸರಿಯಾದ ಮಾರ್ಗದರ್ಶನ ನೀಡದಿದ್ದ ಪಕ್ಷದಲ್ಲಿ ಮುಂದಿನ ಪೀಳಿಗೆ ಈ ಕಡೆ ಭಾರತೀಯರೂ ಅಲ್ಲ ಆ ಕಡೆ ಪಾಶ್ಚಾತ್ಯರೂ ಅಲ್ಲದ ಒಂದು ಹೊಸ ರೀತಿಯ ಪೀಳಿಗೆಗೆ ಎಡೆಮಾಡಿಕೊಟ್ಟು ಈ ರೀತಿ ಬುದ್ಧಿ ಜೀವಿಗಳ ಮಕ್ಕಳು ತ್ರಿಶಂಕುವಿನ ಪರಿಸ್ಥಿತಿಯಾಗುವ ಸಂದರ್ಭ ಹೆಚ್ಚು. ಇಂತವರ ಮಕ್ಕಳಿಗೆ ತಮ್ಮದೇ ಆದ ಸಂಸ್ಕೃತಿಯ ತಳಹದಿಯೇ ಇಲ್ಲದಂತಾಗುತ್ತದೆ.

ಅದೇ ರೀತಿ ಕೊಡಗಿನಿಂದ ಹೊರ ಪ್ರದೇಶಗಳಿಗೆ ಹೋಗಿ ನೆಲೆಸಿದ ಗೌಡರಲ್ಲಿ ಹೆಚ್ಚಿನ ಜನರು ಕೊಡಗಿಗೆ ಹಿಂತಿರುಗಿ ಬಂದು ನೆಲೆಸುವ ಆಸೆಯನ್ನು ಇಟ್ಟುಕೊಂಡಿರುವುದೇ ಕಂಡುಬರುತ್ತಿಲ್ಲವಲ್ಲದೆ ಇಲ್ಲಿನ ಸಂಸ್ಕೃತಿಯನ್ನೂ ಮರೆಯುತ್ತಿದ್ದಾರೆ. ಕೆಲವರಿಗೆ ಚಿಕ್ಕಹಿಡುವಳಿಯ ಉತ್ಪತ್ತಿ ಸಾಕಾಗದೆ ಜೀವನೋಪಾಯಕ್ಕಾಗಿ ನಗರಗಳನ್ನು ಸೇರಿ ಜೀವನ ಮಾಡುತ್ತಿದ್ದರೆ, ಇನ್ನು ಕೆಲವರು ನಗರದ ವಿಲಾಸಿ ಜೀವನಕ್ಕೆ ಮೊರೆಹೋಗಿ ತಮ್ಮ ಆಸ್ತಿ-ಪಾಸ್ತಿಗಳನ್ನು ಮಾರಿ ನಗರಗಳಲ್ಲಿ ನೆಲೆಸಲು ಪ್ರಾರಂಭ ಮಾಡಿದ್ದಾರೆ. ತಮ್ಮ ಸಮಾಜವನ್ನು ಕಡೆಗಣಿಸುತ್ತಿದ್ದಾರೆ. ಹೀಗಾಗಿ ಇಂತಹ ಜನರ ಮುಂದಿನ ಪೀಳಿಗೆಯೂ ಸಹ ಬೇರೆ ದೇಶಗಳಲ್ಲಿ ನೆಲೆಸಿರುವ ಭಾರತೀಯರ ಸ್ಥಿತಿಯ ರೀತಿ ಅಲ್ಲದಿದ್ದರೂ ಇಂತವರ ಮುಂದಿನ ಪೀಳಿಗೆಗೆ ತಮ್ಮ ಪೂರ್ವಜರ ಸಂಸ್ಕೃತಿ ಮರೆತು ಹೋಗಿ ತಮ್ಮದೇ ಆದ ಪರಿಸ್ಥಿತಿಯನ್ನು ಕಲ್ಪಿಸುವ ಸಂದರ್ಭ ಬಹಳಷ್ಟು ಇದೆ. ಇನ್ನು ಊರಿನಲ್ಲಿ ಉಳಿದವರ ಪರಿಸ್ಥಿತಿ ಸಹ ಭಿನ್ನವಾಗಿದೆ. ದೂರ ಊರುಗಳಿಗೆ ತನ್ನ ಹೊಟ್ಟೆಪಾಡಿಗಾಗಿ ಹೋದವರು ಆ ಕಡೆಯೆ ನೆಲೆಸಿದರೆ ಅವರ ಪಾಲಿನ ಆಸ್ತಿ ತನ್ನದಾಗಬಹುದೆಂಬ ಸ್ವಾರ್ಥತೆಯಿಂದ ಹೊರಗೆ ಹೋಗಿ ನೆಲೆಸಿದವರ ಪಾಲಿನ ಆಸ್ತಿಯ ಬಗ್ಗೆ ಯಾವ ಕಾಳಜಿ ಇಲ್ಲದೆ ಹೊರಗೆ ಹೋದವನು ತನಗಿಂತ ಹೆಚ್ಚಿನ ಹಣವನ್ನು ಸಂಪಾದಿಸಿ ತನಗಿಂತ ಚೆನ್ನಾಗಿ ಬದುಕಿ ಬಾಳುತ್ತಿದ್ದನೆಂಬ ಭಾವನೆಯೂ ಇದೆ.

ಆದರೆ ನಗರ ವಾಸಿಗಳ ಜೀವನ ಈಗ ಪ್ರತಿಯೊಂದು ವಸ್ತುಗಳ ಬೆಲೆ ಹೆಚ್ಚಳದಿಂದ ತುಂಬ ತುಟ್ಟಿಯಾಗುತ್ತಿದೆ. ಊರಿನಲ್ಲಿರುವ ಸಹೋದರನು ಹೊರಗೆ ಹೋದ ಸಹೋದರರು ಒಬ್ಬರನ್ನೊಬ್ಬರು ಪ್ರೀತಿ ವಿಶ್ವಾಸಗಳಿಂದ ಕಾಣದೆ ಒಬ್ಬರು ಇನ್ನೊಬ್ಬರಿಗೆ ಸಹಾಯಕರಾಗದೆ, ವ್ಯಾಪಾರ ಮನೋಭಾವದಿಂದ ನೋಡಿದರೆ ನಮ್ಮ ಸಂಸ್ಕೃತಿ ಕುಸಿಯುತ್ತದೆ. ಊರಿನಲ್ಲಿರುವವನಿಗೆ ಹೊರಗಿರುವ ಸಹೋದರ ತಮ್ಮ ಆಸ್ತಿ ಪಾಸ್ತಿಗಳನ್ನು ರೂಢಿಸಲು ತಕ್ಕ ಸಹಾಯ ಮಾಡಬೇಕು. ಊರಿನಲ್ಲಿರುವ ಸಹೋದರ ಬೇರೆ ಊರಿನಲ್ಲಿರುವ ಸಹೋದರನ ಆಸ್ತಿಯನ್ನು ತನ್ನ ಆಸ್ತಿಯಂತೆಯೇ ನೋಡಿಕೊಂಡು, ಆದ ಉಸ್ತುವಾರಿ ಖರ್ಚು ವೆಚ್ಚಗಳನ್ನು ಮುರಿದು ತನ್ನ ಸಹೋದರರಿಗೆ ಕೊಡಬೇಕು. ಹೊರಗೆ ಹೋದ ಸಹೋದರರು ಸಹ ಊರಿನಲ್ಲಿರುವವನ ಕಷ್ಟ ಕಾರ್ಪಣ್ಯಗಳಿಗೆ ಸಹಾಯಕರಾಗಿ, ಮಕ್ಕಳ ವಿದ್ಯಾಭ್ಯಾಸಕ್ಕೂ ಸಹಾಯವನ್ನು ಮಾಡಿದರೆ ಹಿಂದಿನ ಅವಿಭಾಜ್ಯ ಕುಟುಂಬದ ಸಂಸ್ಕೃತಿ ಉಳಿದು ಊರಿನಲ್ಲಿದ್ದವರ ಮತ್ತು ಹೊರಗೆ ಹೋದವರ ಪ್ರೀತಿ ವಿಶ್ವಾಸ ಉಳಿದು, ಒಂದು ಸಮೃದ್ಧಿ ಹೊಂದಿದ ಸಮಾಜವಾಗಿ, ನಮ್ಮ ಸಂಸ್ಕೃತಿಯ ಉಳಿವಿಗೆ ನಾಂದಿಯಾದೀತು. ಇಲ್ಲದಿದ್ದ ಪಕ್ಷದಲ್ಲಿ ಹೊರಗೆ ಹೋದವರದ್ದು ಛಿದ್ರ ಛಿದ್ರವಾದ ಸಂಸ್ಕೃತಿಯಾಗಿ ಪರಿಣಮಿಸಿ, ಹೊಟ್ಟೆಪಾಡಿಗಾಗಿ ವಲಸೆ ಹೋದವರ ಮುಂದಿನ ಪೀಳಿಗೆ ಯಾವುದೇ ದಿಕ್ಕು ಇಲ್ಲದೇ ಹೋಗುವ ಪ್ರಸಂಗ ನೇಳಬಹುದೆಂದು ಸಂಗಾತಿಯ ಅನಿಸಿಕೆ ●

# ಕುರುಂಜಿ ವೆಂಕಟರಮಣ ಗೌಡರ ಕಿರೀಟಕ್ಕಿನ್ನೊಂದು ಗರಿ

**ಸು**ಳ್ಯ ತಾಲ್ಲೂಕಿನ ಅತೀ ಹಿಂದುಳಿದ ಸುಳ್ಯದ ಪರಿಸರದ ಗ್ರಾಮೀಣ ಪ್ರದೇಶಗಳಲ್ಲಿ ವಿದ್ಯಾ ಶಿಕ್ಷಣ ಸಂಸ್ಥೆಗಳನ್ನು ತೆರೆಯುವ ಮೂಲಕ ಶಿಕ್ಷಣ ರಂಗದಲ್ಲಿ ಶ್ರೀ ಕುರುಂಜಿ ವೆಂಕಟರಮಣಗೌಡರು ಸಲ್ಲಿಸಿದ ಅತ್ಯಮೂಲ್ಯ ಸೇವೆಯನ್ನು ಪರಿಗಣಿಸಿ ನವದೆಹಲಿಯ "ಇಂಡಿಯನ್ ಡೆವಲಪ್‌ಮೆಂಟ್ ಮತ್ತು ರಿಸರ್ಚ್ ಎಜುಕೇಷನ್ ಸಂಸ್ಥೆಯು ಶ್ರೀಯುತರಿಗೆ ಈ ಸಾಲಿನ ನ್ಯಾಷನಲ್ ಎಜುಕೇಷನ್ ಎಕ್ಸಲೆನ್ಸ್" ಪ್ರಶಸ್ತಿ ನೀಡಿ ಗೌರವಿಸಿದೆ.

ಈ ಪ್ರಶಸ್ತಿ ಪ್ರಧಾನ ಸಮಾರಂಭವು ಇದೇ ಜುಲೈ 4ರಂದು ನವದೆಹಲಿಯಲ್ಲಿ ನಡೆಯಿತು. ಕುರುಂಜಿಯವರು ಸುಮಾರು 39 ಶಿಕ್ಷಣಸಂಸ್ಥೆಗಳನ್ನು ತೆರೆದಿರುವುದನ್ನು ಗುರುತಿಸಿ ಇದಕ್ಕೂ ಹಿಂದೆ **ರಾಜೀವ್ ಗಾಂಧಿ ಏಕತಾ ಪ್ರಶಸ್ತಿ, ಗ್ಲೋರಿಆಫ್ ಇಂಡಿಯಾ ಇಂಟರ್‌ನ್ಯಾಷನಲ್, ಆರ್ಟ್‌ಆಫ್‌ಇಂಡಿಯಾಗೋಲ್ಡ್-98** ಮೊದಲಾದ ಪ್ರಶಸ್ತಿಗಳು ನೀಡಲ್ಪಟ್ಟಿವೆ.


**ಕುರುಂಜಿ ವೆಂಕಟರಮಣಗೌಡರು**

ಶಿಕ್ಷಣದ ದಿಸೆಯಲ್ಲಿ ಉತ್ತುಂಗಕ್ಕೇರಿದ ಶ್ರೀಯುತರಿಗೆ ಅರೆಭಾಷಿಕ ಜನಾಂಗದ ಪರವಾಗಿ ಕೊಡಗು ಸಂಗಾತಿ ಹೃತ್ಪೂರ್ವಕವಾಗಿ ಅಭಿನಂದನೆ ಸಲ್ಲಿಸುತ್ತದೆ. ○

## ಪ್ರಜ್ಞಾಹೀನರಾಗಲು ಕಾರಣ ಏನು?

**ದು**ಃಖದ ಸುದ್ದಿ ಕೇಳಿ ಅಥವಾ ಹಠಾತ್ತನೆ ಹೆದರಿ ಎಷ್ಟೋ ಜನ ಪ್ರಜ್ಞಾಹೀನರಾಗುತ್ತಾರೆ. ಆಗ ಅವರು ಬೆವರಿ ತಣ್ಣಗಾಗುತ್ತಾರೆ. ಮುಖದಲ್ಲಿ ಗಾಬರಿ ಕಾಣುತ್ತದೆ. ಪ್ರಜ್ಞೆ ಹೋಗುತ್ತದೆ. ಪ್ರಜ್ಞಾಹೀನರಾಗಲು ಇನ್ನೂ ಅನೇಕ ಕಾರಣಗಳಿವೆ. ಸಾಕಷ್ಟು ಗಾಳಿ ಬೆಳಕುಗಳಿಲ್ಲದ ಕೊಠಡಿ, ಹಸಿವು, ದಣಿವು, ತೀವ್ರನೋವು, ಮನಸ್ಸಿಗೆ ಆಘಾತ ಇವೆ ಮುಖ್ಯ ಕಾರಣಗಳು

ಪ್ರಜ್ಞೆ ಎಂದರೆ, ಮೆದುಳಿನ ಕೆಲಸ ಸರಿಯಾಗಿ ನಡೆಯಬೇಕಾದರೆ ಅಲ್ಲಿಗೆ ರಕ್ತ ಸಂಚಲನೆ ಸರಿಯಾಗಿ ಆಗಬೇಕು. ಮೆದುಳಿಗೆ ರಕ್ತ ಸರಿಯಾಗಿ ಹೋಗುವವರೆಗೆ ನಮ್ಮ ದೇಹದ ಕೆಲಸಗಳು ಸಮರ್ಪಕವಾಗಿ ನಡೆಯುತ್ತದೆ. ಪ್ರಜ್ಞೆಯನ್ನು ಕಾಪಾಡುವುದೇ ಮೆದುಳಿನ ಕೆಲಸ. ಮೆದುಳಿಗೆ ರಕ್ತ ಸರಬರಾಜಾಗುವಲ್ಲಿ ಅಡಚಣೆ ಉಂಟಾದರೆ ದೈಹಿಕ ಕಾರ್ಯಕ್ಕೆ ತೊಂದರೆಯಾಗುತ್ತದೆ. ಆದ್ದರಿಂದ ಮೆದುಳಿಗೆ ಅಗತ್ಯವಿರುವಷ್ಟು ರಕ್ತ ಸರಬರಾಜಾಗದಿದ್ದರೆ ಪ್ರಜ್ಞೆ ಹೋಗುತ್ತದೆ ಎಂಬ ತೀರ್ಮಾನಕ್ಕೆ ಬರಬಹುದು.

ಪ್ರಜ್ಞೆ ತಪ್ಪುವುದನ್ನು ಕೆಲವು ಕ್ರಮಗಳಿಂದ ತಡೆಯಬಹುದು. ಪ್ರಜ್ಞೆ ತಪ್ಪಿ ಬೀಳುವ ಸೂಚನೆ ಕಂಡ ಕೂಡಲೇ ವ್ಯಕ್ತಿಯನ್ನು ಮಲಗಿಸಬೇಕು ಹಾಗೆ ಮಾಡಲು ಸಾಧ್ಯವಾಗದಿದ್ದರೆ ಅವನು ತನ್ನ ಎರಡು ಮಂಡಿಗಳ ಮಧ್ಯೆ ತಲೆ ಇಟ್ಟು ಬಗ್ಗಿ ನಿಲ್ಲಬೇಕು. ಇದರಿಂದ ಮೆದುಳಿಗೆ ಹೆಚ್ಚಿನ ರಕ್ತ ಹರಿದು, ವ್ಯಕ್ತಿ ಪ್ರಜ್ಞೆ ಕಳೆದುಕೊಳ್ಳುವ ಸಂಭವ ಕಡಿಮೆ.

ಪ್ರಜ್ಞೆ ಕಳೆದುಕೊಂಡಾಗ ಅವರನ್ನು ಮಲಗಿಸಿ, ಅವರ ಬಟ್ಟೆಗಳನ್ನು ಸಡಿಲಗೊಳಿಸಬೇಕು. ಕಾಲುಗಳನ್ನು ಮೇಲ್ಕೆತ್ತಿ, ತಲೆ ಸ್ವಲ್ಪ ಕೆಳಮಟ್ಟದಲ್ಲಿರುವಂತೆ ನೋಡಿಕೊಳ್ಳಬೇಕು. ಇದರಿಂದ ಮೆದುಳಿಗೆ ಹೆಚ್ಚು ರಕ್ತ ಹರಿದು, ಆತ ಪ್ರಜ್ಞೆಮರಳಿ ಪಡೆಯುತ್ತಾನೆ. ಜ್ಞಾನ ಬಂದ ಕೂಡಲೇ ಅವನಿಗೆ ಟೀ ಅಥವಾ ಕಾಫಿ ಕೊಡಬೇಕು.

ತಲೆ ಗಾಯದಿಂದ ಅಥವಾ ಬಿಸಿಲಿನ ತಾಪದಿಂದ ಯಾರಾದರೂ ಜ್ಞಾನ ಕಳೆದುಕೊಂಡಾಗ ಕೂಡಲೇ ಆಸ್ಪತ್ರೆಗೆ ಸೇರಿಸುವುದು ಅಗತ್ಯ.

○ **ಪಟ್ಟಡ ನೀಶಾ**

## ಬೋರು

ಜೀವನದಲ್ಲಿ ಕನಸು–
ಗಳದೆ ಕಾರು ಬಾರು ।
ಇದಿಲ್ಲದಿದ್ದರೆ ಬದುಕು
ಬರೀ ಬೋರು ॥

## ವ್ಯತ್ಯಾಸ

ಮನ ಮನ ಕಲೆ–
ತಾಗ ಪ್ರೀತಿ ।
ಮನ ಮನ ಕೊಳೆ–
ತಾಗ ದ್ವೇಷ

## ಅಂದು - ಇಂದು

ಅಂದು ಆಗಿತ್ತು,
ಸಂಪ್ರದಾಯ ಬದ್ಧ
ಆಚಾರ–ವಿಚಾರಗಳೇ ನಮ್ಮ
ಸಂಸ್ಕೃತಿ
ಇಂದು ಆಗಿವೆ...
ವಿದೇಶಿ ಫ್ಯಾಷನ್‌ಗಳ
ಅನುಕರಣೆಯೇ
ನಮ್ಮೀ ಸಂಸ್ಕೃತಿ.

● **ಸ್ಮಿತಾ ಪಳಂಗಾಯ, ಪಂಜ**

# ಭಾರತೀಯ ವಾಯು ಸೇವಾದಳದ ನಿವೃತ್ತ ಮಾಸ್ಟರ್ ವಾರೆಂಟ್ ಆಫೀಸರ್ ಕೂಡಕಂಡಿ ಮುತ್ತಣ್ಣ ಅಪ್ಪಾಜಿ

**ಭಾ**ಗಮಂಡಲನಾಡು ಬೇಂಗೂರು ಗ್ರಾಮದ ಕೂಡಕಂಡಿ ದಿವಂಗತ ಮುತ್ತಣ್ಣ ಮತ್ತು ರಾಮಕ್ಕ ದಂಪತಿಗಳ ಏಳು ಜನ ಗಂಡು ಮಕ್ಕಳು ಮತ್ತು ಒಬ್ಬಳು ಹೆಣ್ಣುಮಗಳ ಪೈಕಿ ಜ್ಯೇಷ್ಠ ಪುತ್ರನಾಗಿ ಜನಿಸಿದರು. ಇವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಕೊಟ್ಟೂರು ಗ್ರಾಮದ, ಕೊಟ್ಟೂರು ಶಾಲೆಯಲ್ಲಿಯೂ ಮತ್ತು ಪ್ರೌಢ ವಿದ್ಯಾಭ್ಯಾಸವನ್ನು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿಯೂ ಮಾಡಿ ಮುಗಿಸಿದರು.



**ಕೂಡಕಂಡಿ ಅಪ್ಪಾಜಿ ದಂಪತಿಗಳು**

1948ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಕೂಡಲೇ ಭಾರತೀಯ ವಾಯು ಸೇವಾ ದಳವನ್ನು ಸೇರಿ ಮೊದಲ 6 ತಿಂಗಳು ಬೆಂಗಳೂರಿನ ಜಾಲಹಳ್ಳಿಯಲ್ಲಿ ಮಿಲಿಟರಿ ತರಬೇತಿ ಪಡೆದು ನಂತರ ಒಂದು ವರ್ಷ ಮದ್ರಾಸಿನ ತಾಂಬರಂನಲ್ಲಿ ಯುದ್ಧ ಮತ್ತು ಸಾರಿಗೆ ವಿಮಾನಗಳ ತಾಂತ್ರಿಕ ಜ್ಞಾನವನ್ನು ಪಡೆದು ವಾಯು ದಳದ ನಾನಾ ತುಕಡಿಗಳಲ್ಲಿ ಸೇವೆ ನಿರ್ವಹಿಸಿರುವರು. ಮೇಲ್ಮಟ್ಟದ ತಾಂತ್ರಿಕಜ್ಞಾನದ ಅವಶ್ಯಕತೆ ಬಂದಾಗಲೆಲ್ಲ ಇವರನ್ನು ಹೆಚ್ಚಿನ ತರಬೇತಿಗಳಿಗೆ ಚುನಾಯಿಸಿ ಕಳುಹಿಸಿ, ಎಲ್ಲಾ ಮಟ್ಟದಲ್ಲೂ ಸಾಮಾನ್ಯರಂತೆ ತಾಂತ್ರಿಕ ಜ್ಞಾನಾರ್ಜನೆಯನ್ನು ಸಂಪಾದಿಸಿಕೊಂಡು ಹೆಚ್ಚಾಗಿ ಯುದ್ಧದ ತುಕಡಿಗಳಲ್ಲಿ ಸೇವೆ ಸಲ್ಲಿಸಿರುವರು. 1952ರಲ್ಲಿ ಪಾಕಿಸ್ತಾನದ ಆರ್ಭಟದಿಂದ ಯುದ್ಧದ ತುಕಡಿಗೆ ವರ್ಗಾಯಿಸಲ್ಪಟ್ಟು 1971ರ ಇಂಡೋ ಪಾಕ್ ಯುದ್ಧದ ಅಂತ್ಯದವರೆಗೆ ಹೆಚ್ಚಿನ ಭಾಗ ಯುದ್ಧದ ವಿಮಾನಗಳಲ್ಲಿಯೇ ಕೆಲಸ ನಿರ್ವಹಿಸಿರುವರು. 1961ರಲ್ಲಿ ಗೋವಾ ಆಪರೇಷನ್, 1962ರಲ್ಲಿ ಇಂಡೋ ಚೈನ ಯುದ್ಧ, 1965ರಲ್ಲಿ ಇಂಡೋ ಪಾಕ್ ಯುದ್ಧ ಮತ್ತು 1971ರಲ್ಲಿ ಎರಡನೆ ಇಂಡೋ ಪಾಕ್ ಯುದ್ಧಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಇವರ ಸೇವೆಯ ಗುರುತಾಗಿ 1979ರ ಆಗಸ್ಟ್ 15ರಲ್ಲಿ ಮೆರಿಟೋರಿಯಸ್ ಸೇವಾ ಪದಕ ಪ್ರಧಾನ ಮಾಡಿರುವರು. 33 ವರ್ಷಗಳ ಧೀರ್ಘ ಸೇವಾವಧಿಯಲ್ಲಿ ಫೈಲೆಟ್‌ಗಳಿಗೆ ತರಬೇತಿ ನೀಡುವ ಅಕಾಡೆಮಿಗಳಲ್ಲಿಯೂ, ಫೈಟರ್ ಬಾಂಬರ್ ತುಕಡಿಗಳಲ್ಲಿಯೂ, ಸಾರಿಗೆ ವಿಭಾಗದ ವಿಮಾನಗಳಲ್ಲಿಯೂ ಮತ್ತು ಹೆಲಿಕ್ಯಾಪ್ಟರ್‌ಗಳಲ್ಲಿಯೂ ಸೇವೆ ಸಲ್ಲಿಸಿರುತ್ತಾರೆ. H.S. 748 AVRO ಸಾರಿಗೆ ವಿಮಾನ ತಯಾರಿಕೆಯಲ್ಲಿಯೂ, ವಾಯು ಪಡೆಯ ತಾಂತ್ರಿಕ ವರ್ಗದವರ ಪರೀಕ್ಷೆಗಳಲ್ಲಿ Chief examinar ಆಗಿಯೂ, NCC Air wing, Andra university, Visakapatnam ನಲ್ಲಿ ತರಬೇತಿ ಉಪನ್ಯಾಸಕರಾಗಿಯೂ, ಮೋಟಾರ್ ಟ್ರಾನ್ಸ್‌ಪೋರ್ಟ್ ಆಫೀಸರ್ ಆಗಿ ಮತ್ತು ಒಂದು ತುಕಡಿಯ ಎಂಜಿನೀಯರ್ ಆಫೀಸರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. SNCOs Messನ CMC ಆಗಿ ಮೆಸ್‌ನ ಆಡಳಿತವನ್ನು ನಡೆಸಿಕೊಂಡು ಬಂದಿರುತ್ತಾರೆ.

ಹೀಗೆ ದೇಶ ಸೇವೆಯ ಮಧ್ಯದಲ್ಲಿ ಸೇವಾ ವಿಶ್ರಾಮದ ಸಮಯದಲ್ಲಿ ದೇಶದ ಪುಣ್ಯ ಸ್ಥಳಗಳನ್ನು ಭೇಟಿ ಮಾಡಿದ್ದಾರೆ. ಹೊರ ಊರುಗಳಲ್ಲಿ ಕನ್ನಡ ಸಂಘಗಳ ಸಂಘಟನೆ, ಗೌಡ ಜನರ ಸಂಘಟನೆ, ಕೊಡಗಿನ ಹಬ್ಬಗಳಾದ ಬಿಸು, ಕೈಲ್ ಪೊಳ್ದು, ಹುತ್ತರಿ ಹಬ್ಬಗಳನ್ನು ಜನಾಂಗದ ಸಂಸಾರಸ್ಥರ ಮನೆಗಳಲ್ಲಿ ಆಚರಿಸುವ ಪದ್ಧತಿಯಿದ್ದು ದೇಶದ ನಾನಾ ಭಾಗಗಳಲ್ಲಿ ಇದ್ದಾಗ ಗೌಡರ ಸಂಘಟನೆಗೆ ಶ್ರಮಿಸಿದ್ದಾರೆ.

1956ನೇ ಇಸವಿಯಲ್ಲಿ ಮಡಿಕೇರಿ ನಾಡು ಕಾಂತೂರು ಗ್ರಾಮದ ಬೊಳ್ತಜಿ ದಿ|| ಸುಬ್ಬಯ್ಯ ಮತ್ತು ಅಮ್ಮವ್ವ ದಂಪತಿಗಳ 2ನೇ ಮಗಳಾದ ಪೂವಮ್ಮನವರನ್ನು ಲಗ್ನವಾದರು. ತನ್ನ ಗಂಡನ ಜೊತೆಯಲ್ಲಿ ವಿವಾಹ ದಿನದಿಂದಲೇ ದೇಶದ ನಾನಾ ಭಾಗಗಳಲ್ಲಿ ಸುತ್ತಾಡಿರುವುದರಿಂದ ಸಾಕಷ್ಟು ಅನುಭವದ ಖಣಿಯಾಗಿದ್ದಾರೆ ಶ್ರೀಮತಿ ಪೂವಮ್ಮನವರು.

ಇವರ ಯೌವ್ವನದ ಬಹುಪಾಲು ಭಾರತೀಯ ವಾಯು ಸೇನೆಗೆ ಹಾಗೂ ದೇಶ ಸೇವೆಗೆ ಮುಡಿಪಾಗಿಟ್ಟು, ಸೇವೆಯಿಂದ ನಿವೃತ್ತಿ ಹೊಂದಿ, ಮಡಿಕೇರಿಯ ಹೊಸಬಡಾವಣೆಯಲ್ಲಿ ವಾಸವಾಗಿದ್ದು, ಈಗ "ಜನಾಂಗದ ಪ್ರಗತಿಗಾಗಿ ಕಾಳಜಿ ವಹಿಸಿ" ಸೇವೆ ಸಲ್ಲಿಸುತ್ತಿರುವ ಇವರಿಗೆ ಆಯುರಾರೋಗ್ಯ ಸುಖ ಸಂಪನ್ನ ನೀಡಲೆಂದು ಜನಾಂಗದ ಪರವಾಗಿ "ಕೊಡಗು ಸಂಗಾತಿ" ಶುಭವನ್ನು ಕೋರುತ್ತದೆ.

○ **ಸಂಗಾತಿ ವರದಿ**

# ಗೌಡಕೇಸರಿ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ

ಪ್ರೊ|| ಪೂಜಾರಿ ಮೊಣ್ಣಪ್ಪ

ಭಾಗ - ೪

[ಹಿಂದಿನ ಸಂಚಿಕೆಗೆಯಿಂದ]

ದಲಿತ ವರ್ಗದ ಏಳಿಗೆಗಾಗಿ ಶ್ರಮಿಸಿದ ಡಾ|| ಅಂಬೇಡ್ಕರ್‌ರಂತೆ, ಮುದ್ದಪ್ಪನವರು ಶೋಷಣೆಯ ವಿರುದ್ಧ ಹೋರಾಟ ನಡೆಸಿ ತನ್ನ ಸಮಾಜದ ತನ್ನ ತನವನ್ನು ಗಳಿಸಿಕೊಟ್ಟಿದ್ದಾರೆ. ಶ್ರೀ ಮುದ್ದಪ್ಪನವರು ಜಾತಿವಾದಿಯಲ್ಲ ಎಂಬುದಕ್ಕೆ ಸಾಕ್ಷಿಯಾಗಿ ಇವರ ಸ್ನೇಹಿತ ದಿ|| ಐಚೆಟ್ಟಿರ ಸುಬ್ಬಯ್ಯನವರು ಮತ್ತು ಮುದ್ದಪ್ಪನವರು ಅವರ ವಿದ್ಯಾರ್ಥಿ ಜೀವನದಿಂದಲೇ ಸ್ನೇಹಿತರಾಗಿ ಒಂದೇ ತಂದೆಯ ಮಕ್ಕಳಂತೆ ಕೊನೆಯವರೆವಿಗೂ ಆತ್ಮ ಬಂಧುಗಳಾಗಿದ್ದರು. ಶ್ರೀ ಮುದ್ದಪ್ಪನವರ ಸ್ನೇಹಿತರಾದ ಐ. ಸಿ. ಸುಬ್ಬಯ್ಯನವರು ಮುದ್ದಪ್ಪನವರ ಮರಣಾನಂತರವೂ ಗೌಡರ ಶ್ರೇಯಸ್ಸಿಗಾಗಿ ಸಹಾಯ ಮಾಡಿದ್ದಾರೆ. ಸುಬ್ಬಯ್ಯನವರು ಕೊಡಗಿನ ಅಸಿಸ್ಟೆಂಟ್ ಕಮೀಷನರಾಗಿ, ಚೀಫ್ ಸೆಕ್ರೆಟರಿಯಾಗಿ, ಕೊನೆಗೆ ಕೊಡಗಿನ ಜಿಲ್ಲಾಧಿಕಾರಿಯಾಗಿ ಗೌಡರಿಗೆ ಹಲವಾರು ರೀತಿಯಲ್ಲಿ ಸಹಾಯ ಮಾಡಿದ್ದಾರೆ. ಶ್ರೀ ಸುಬ್ಬಯ್ಯನವರು ಜೀವಂತವಿದ್ದಾಗ ಆಗಿನ ಕೊಡಗಿನಲ್ಲಿ ಸರ್ಕಾರಿ ಉದ್ಯೋಗ ವಿನಿಮಯಕ್ಕಾಗಿ ಸ್ಥಾಪಿಸಿದ್ದ ಸ್ಟಾಫ್ ಸೆಲೆಕ್ಷನ್ ಬೋರ್ಡಿನ ಅಧ್ಯಕ್ಷರಾಗಿ ನ್ಯಾಯವನ್ನು ಒದಗಿಸಿಕೊಟ್ಟಿದ್ದಾರೆ. ಅಲ್ಲದೆ ಗೌಡ ಸಮಾಜದ ಜನರಿಗೆ ಸರ್ಕಾರಿ ಉದ್ಯೋಗದಲ್ಲಿ ನೇಮಕಾತಿಯಲ್ಲೂ, ಸರ್ಕಾರಿ ಜಮೀನನ್ನು ಮಂಜೂರು ಮಾಡುವುದರಲ್ಲೂ ತುಂಬಾ ಸಹಾಯ ಮಾಡಿದ್ದಾರೆ. ಇದು ಜನಾಂಗದ ಎಲ್ಲರೂ ಸ್ಮರಿಸಿಕೊಳ್ಳಬೇಕಾದ ವಿಷಯ.

ಮಡಿಕೇರಿಯ ಗೌಡ ಬೋರ್ಡಿಂಗನ್ನು 1948ರಲ್ಲಿ ಸರ್ಕಾರ ವಶಪಡಿಸಿಕೊಳ್ಳಬೇಕೆಂಬ ಉದ್ದೇಶವಿದ್ದಾಗ ಮುದ್ದಪ್ಪನವರು ಆಗಿನ ಚೀಫ್ ಕಮೀಷನರಾಗಿದ್ದ ಸಿ. ಟಿ. ಮೊದಲಿಯಾರ್‌ರವರನ್ನು ಬೋರ್ಡಿಂಗ್‌ಗೆ ಭೇಟಿ ಮಾಡಿಸಿ, ಅದರ ಹಿಂದಿನ ಚರಿತ್ರೆಯನ್ನು ಅವರಿಗೆ ವಿವರಿಸಿ ಸರ್ಕಾರ ವಶಪಡಿಸುವ ಯೋಜನೆಯನ್ನು ಕೈ ಬಿಡುವಂತೆ ಮಾಡಿ ಆ ಕಟ್ಟಡವು ವಿದ್ಯಾಸಂಘಕ್ಕೆ ಉಳಿಯುವಂತೆ ಮಾಡಿರುವುದನ್ನು ಸಮಾಜದವರು ನೆನೆಸಿಕೊಳ್ಳಬೇಕಾಗಿದೆ. ದಿ|| ಶ್ರೀ ಮುದ್ದಪ್ಪನವರು ತನ್ನ ಜಾತಿಯ ವಿಷಯದಲ್ಲಿ ಯಾರಾದರೂ ಅವಹೇಳನ ಮಾತಾಡಿದರೆ ಅವರು ಎಷ್ಟೇ ದೊಡ್ಡ ವ್ಯಕ್ತಿಯಾಗಿದ್ದರೂ ಅವರನ್ನು ಅಲ್ಲಿಯೇ ಖಂಡಿಸುತ್ತಿದ್ದರು ಎಂಬುದಕ್ಕೆ ಒಂದು ದಿನ 1948ರಲ್ಲಿ ನಡೆದ ಘಟನೆಯೇ ಸಾಕ್ಷಿಯಾಗಿದೆ.

ಶ್ರೀ ಮುದ್ದಪ್ಪನವರು ಯಾರ ಶಿಫಾರಸ್ಸನ್ನು ಸಹಿಸದವರು. ಏಕೆಂದರೆ ಪ್ರತಿಯೊಬ್ಬರು ಅವರಂತೆ ಸ್ವಂತ ಅರ್ಹತೆ ಮೇಲೆಯೇ ಮುಂದುವರಿಯಬೇಕೆಂದು ಅವರ ದೃಢ ನಿರ್ಧಾರವಾಗಿತ್ತು.

ಶ್ರೀ ಮುದ್ದಪ್ಪನವರು ದುರ್ಬಲ ವರ್ಗದ ಏಳಿಗೆಗಾಗಿ ತುಂಬಾ ಸಹಾನುಭೂತಿ ಇದ್ದರೆನ್ನುವುದಕ್ಕೆ ಅವರ ಮನೆಯಲ್ಲಿಯೇ ಇಬ್ಬರು ಹರಿಜನ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ಸಾಕುತ್ತಿದ್ದರೆಂಬುದೇ ಸಾಕ್ಷಿ. ಅವರಿಗೆ ಊಟ, ವಸತಿ, ಬಟ್ಟೆ-ಬರೆಗಳನ್ನು ಕೊಟ್ಟು ಸಾಕುತ್ತಿದ್ದರೆಂಬುವುದೇ ಸಾಕ್ಷಿ.

ಮಡಿಕೇರಿಯ ಗೌಡ ಬೋರ್ಡಿಂಗ್‌ನಲ್ಲಿಯ ವಿದ್ಯಾರ್ಥಿಗಳು ಓದುವ ಪ್ರಗತಿಯ ಬಗ್ಗೆ ಆಗಾಗ್ಗೆ ವಿಚಾರಿಸುತ್ತಾ ಕೆಲವು ಸಲ ವಿದ್ಯಾರ್ಥಿಗಳು ಸಮಯಕ್ಕೆ ಸರಿಯಾಗಿ ಏಳುತ್ತಾರೊ ಇಲ್ಲವೋ ಎಂಬುದನ್ನು ಸಹ ಒಬ್ಬ ಡಿಸ್ಟ್ರಿಕ್ಟ್ ಮತ್ತು ಸೆಷೆನ್ಸ್ ಜಡ್ಜ್ ಎಷ್ಟರ ಮಟ್ಟಿಗೆ ನಿಗಾ ವಹಿಸುತ್ತಿದ್ದರೆಂದರೆ ಅವರಿಗೆ ತಮ್ಮ ಸಮಾಜದ ಯುವಕರ ವಿದ್ಯಾ ಪ್ರಗತಿಯ ವಿಷಯದಲ್ಲಿ ಎಷ್ಟರ ಮಟ್ಟಿಗೆ ನಿಗವೆಂಬುದನ್ನು ತೋರಿಸುತ್ತದೆ. ಮುದ್ದಪ್ಪನವರ ಮೇಲೆ ಗೌಡ ಸಮಾಜದ ಜನರಿಗಿದ್ದ ಪ್ರೀತಿ ಗೌರವ ಅಷ್ಟಿಷ್ಟಲ್ಲ. ಕೆಲವರು ಆ ಸಮಯದಲ್ಲಿ ಮಾತಾಡುತ್ತಿದ್ದುದ್ದನ್ನು ಕೇಳಿದ್ದೇನೆ. "ನಮ್ಮ ಜಡ್ಜ್ ಕೊಡಗ್‌ನ ಅಲ್ಲಾಡ್ಸಿಬುಟ್ಟಿತ್, ಇಂಥವು ಒಬ್ಬ ಇರಕು, ಜಡ್ಜ್ ಮುಂದೆ ಬಾರದಿದ್ದರೆ ನಮ್ಮನ ಕೇಳವೆ ಇತ್ಲೆ" ಈ ಅನಿಸಿಕೆ ಉತ್ಪ್ರೇಕ್ಷೆಯೇನಲ್ಲ. ಏಕೆಂದರೆ ಗೌಡರ ಸ್ಥಿತಿಯನ್ನು ಆ ಕಾಲದಲ್ಲಿ ಯಾರೂ ಕೇಳುವವರಿಲ್ಲದೆ ಅವರ ಪರಿಸ್ಥಿತಿ ಸಂಪೂರ್ಣ ಕೆಟ್ಟಿತ್ತು. ತಮ್ಮ ಸಂಕಟಗಳನ್ನು ಸರ್ಕಾರಕ್ಕೆ ಹೇಳಿಕೊಳ್ಳುವುದಕ್ಕೆ ಮತ್ತು ರಾಜಕೀಯವಾಗಿ ಪ್ರತಿನಿಧಿಸುವುದಕ್ಕೆ ಯಾರೂ ಇತ್ತಿಲ್ಲ.

ಮುದ್ದಪ್ಪನವರಿಗೆ ಅವರಂತೆಯೇ ಬೇರೆ ಯಾರಾದರು ಮುಂದೆ ಬರಬೇಕೆಂಬ ಬಯಕೆ ಇತ್ತು. ಅವರು ಶಿಸ್ತಿನ ಸಿಪಾಯಿಯಾಗಿದ್ದರು. ತೀಕ್ಷ್ಣ ಮತೀಯ ಹಾಗೂ ನಿರ್ಮಲ ಮನಸ್ಸಿನ ವ್ಯಕ್ತಿಯಾಗಿದ್ದರು.

ಶ್ರೀ ಮುದ್ದಪ್ಪನವರು ತಮ್ಮ ಸಮಾಜದ ಸಂಪರ್ಕವನ್ನು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯವರೊಡನಲ್ಲದೆ ಹಳೇ ಮೈಸೂರಿನ ಭಾಗದ ಒಕ್ಕಲಿಗರೊಡನೆಯೂ ಬೆಳೆಸುವುದಕ್ಕೂ ಕಾರಣಕರ್ತರಾಗಿದ್ದರು. ಹಾಸನ, ಮೈಸೂರು, ಬೆಂಗಳೂರು ಮತ್ತು ಮಂಡ್ಯದ ಕಡೆಯ ಒಕ್ಕಲಿಗರ ಮುಖಂಡರೊಡನೆ ಸಂಪರ್ಕ ಬೆಳೆಸಿ ಅಲ್ಲಿನ ಮುಖಂಡರುಗಳನ್ನು ವಿದ್ಯಾಸಂಘದ ಮಹಾಸಭೆಗಳಿಗೆ ಆಹ್ವಾನಿಸಿ ಅವರುಗಳ ಅಭಿಪ್ರಾಯವನ್ನು ಮತ್ತು ಉದ್ದೇಶಗಳನ್ನು ಸಮಾಜದ ಜನರಿಗೆ ತಿಳಿಯುವಂತೆ ಮಾಡುತ್ತಿದ್ದರು. ಅಲ್ಲದೆ ಕೊಡಗಿನಲ್ಲಿರುವ ಸೋಮವಾರಪೇಟೆ ತಾಲ್ಲೂಕಿನ ಒಕ್ಕಲಿಗರ ಸಂಪರ್ಕವನ್ನು ಗಳಿಸಲು ಪ್ರಯತ್ನಿಸಿ ಅಲ್ಲಿಯ ವಿದ್ಯಾರ್ಥಿಗಳಿಗೆ ಮಡಿಕೇರಿ ಬೋರ್ಡಿಂಗ್‌ನಲ್ಲಿ ಓದುವ ವ್ಯವಸ್ಥೆ ಮಾಡಿದ್ದರು. [ಮುಂದುವರಿಯುವುದು]

ಈ ರೀತಿಯಾಗಿ ಹಿಂದುಳಿದ ಸಮಾಜದ ಮೇಲ್ಮೈಗಾಗಿ ಬಹಳಷ್ಟು ಶ್ರಮಿಸಿದ್ದಾರೆ. ಇವರಿಗೆ ತನ್ನ ಮಾತೃ ಭಾಷೆಯನ್ನು ಮುಂದಿನ ಪೀಳಿಗೆಯವರು ಮುಂದುವರಿಸಿ ಕೊಂಡು ಹೋಗಬೇಕೆಂಬ ಅಭಿಲಾಷೆ ಇದ್ದು, ಗೌಡನಾದವನು ಅವರನ್ನು ದಾರಿ ಯಲ್ಲಿ ಕಂಡು ಕನ್ನಡದಲ್ಲಿ ಮಾತನಾಡಿಸಿ ದರೆ ತನ್ನ ಅರೆಭಾಷಾಭಿಮಾನದಿಂದ ಆ ರೀತಿ ಪರಕೀಯನಂತೆ ವರ್ತಿಸಿದವರನ್ನು ತರಾಟೆಗೆ ತೆಗೆದುಕೊಂಡ ಸಂದರ್ಭಗಳೂ ಹಲವಾರು ಇವೆ.

ದಿವಂಗತ ಮುದ್ದಪ್ಪನವರು ಆತ್ಮ ಗೌರ ವಕ್ಕಾಗಿ ಹಾಗೂ ಸಮಾಜದವರ ಗೌರವ ಕ್ಕಾಗಿ ಬಲಾಢ್ಯ ವರ್ಗದವರ ದಬ್ಬಾಳಿಕೆ ಯನ್ನು ಎದುರಿಸಿ ತನ್ನ ಸಮಾಜದವರಿಗೂ ಅವರಂತೆಯೇ ಸರಿಯಾದ ಸ್ಥಾನಮಾನಗಳು ಸಿಗುವಂತಾಗಬೇಕೆಂಬ ತಮ್ಮಹೆಬ್ಬಯಕೆಯ ನ್ನು ಸಾಕಷ್ಟು ಸಾಧಿಸಿದರು. ಅವರ ಅಭಿ ಲಾಷೆಯಂತೆ ಆಗಿನ ಕಾಲದ ಯುವಕರೊ ಬ್ಬರೇ ಪದವೀಧರರಾಗಲು ಪ್ರಾರಂಭವಾ ಯಿತು. ಹಲವಾರು ಜನ ವಕೀಲರಾದರು, ಡಾಕ್ಟರ್‌ಗಳಾದರು, ಇಂಜಿನೀಯರ್‌ಗಳಾ ದರು. ಆದರೆ ಕೊಡಗಿನ ಗೌಡರಲ್ಲಿ ನ್ಯಾಯಾಂಗ ಇಲಾಖೆಯಲ್ಲಿ ಅವರ ನಂತರ ಯಾರೂ ಇಂದಿನವರೆಗೆ ನ್ಯಾಯಾಧೀಶರಾಗ ಲಿಲ್ಲ. ಅದೇ ರೀತಿ ಇವರ ತಮ್ಮ ಸೋಮ ಣ್ಣನವರಂತೆ ಯಾರೂ ಲೋಕಸಭಾ ಸದ ಸ್ಯರೂ ಆಗಲಿಲ್ಲ.

ದಿವಂಗತ ಮುದ್ದಪ್ಪ ಸೋಮಣ್ಣನವ ರೇನು ದೊಡ್ಡ ಹಣವಂತರಲ್ಲದಿದ್ದರೂ ಅವರ ಆಕಾಂಕ್ಷೆ ದೊಡ್ಡದಿತ್ತು. ಸಮಾಜ ದ ಏಳಿಗೆಗಾಗಿ ಹೃದಯ ಮಿಡಿತವಿತ್ತು. ಅವರ ಕಾಲದಲ್ಲಿ ಹೆಚ್ಚಿನ ಜನ ವಿದ್ಯಾವಂತ ರಲ್ಲದಿದ್ದರೂ ಜನತೆಯಲ್ಲಿ ಒಗ್ಗಟ್ಟಿತ್ತು. ಈಗ ಆ ಒಗ್ಗಟ್ಟು ಕಂಡುಬರುತ್ತಿಲ್ಲ. ಈಗಿ ನ ನಮ್ಮ ರಾಜಕೀಯ ಧುರೀಣರ ವಿದ್ಯಾವಂ ತರ ಹಾಗೂ ಸ್ಥಿತಿವಂತರ ಭಾವನೆ ಬೇರೆ ರೀತಿಗೆ ತಿರುಗಿದೆ. ಸಮಾಜದ ಒಗ್ಗಟ್ಟಿಗಾಗಿ ಸಮಾಜದ ತನ್ನತನವನ್ನು ಕಾಪಾಡಲು ಮತ್ತು ಪ್ರಗತಿಯ ಸಾಧನೆ ಇವುಗಳನ್ನು ಮುದ್ದಪ್ಪನವರಂತೆ ಸಿಂಹದ ಮರಿಯಾಗಿ ಸಿಂಹ ಘರ್ಜನೆ ಮಾಡುವ ಗಂಡೆದೆ ಈಗ ಇಲ್ಲವಾಗಿದೆ.

ನಮ್ಮ ಸಮಾಜದಲ್ಲಿ ಕ್ಷೀಣಿಸುತ್ತಿರುವ ಸಂಸ್ಕೃತಿಯನ್ನು ಉದ್ಧರಿಸಲು ದಿವಂಗತ ಮುದ್ದಪ್ಪನವರಂತಹ ಸಿಂಹದ ಮರಿ ಹುಟ್ಟ ಬೇಕು. ಅವರಂತೆ ಸಮಾಜದ ತನ್ನ ತನವ ನ್ನು ಉಳಿಸುವ ಸಿಂಹ ಘರ್ಜನೆ ಆಗಬೇಕು ಎಂಬ ಉದ್ದೇಶದಿಂದ ಈ ಪುಟ್ಟ ಲೇಖನವ ನ್ನು ಬರೆದು ದಿವಂಗತ ಶ್ರೀ ನಿಡ್ಯಮಲೆ ಮುದ್ದಪ್ಪನವರು ಮಾಡಿದ ಶ್ರೇಷ್ಠ ಮತ್ತು ಅವರ ಹೆಸರು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಚರಿತ್ರೆಯಲ್ಲಿ ಸ್ಥಿರವಾಗಿ ಉಳಿಯುವಂತೆ ಅವರ ಹೆಸರಿನ ಲ್ಲೊಂದು ಸ್ಮಾರಕ ಸ್ಥಾಪಿಸಿ ದಿವಂಗತ ಮುದ್ದಪ್ಪನವರು ಬಿಟ್ಟುಹೋದ ಕೆಲಸ ವನ್ನು ಮುಂದುವರಿಸಲು ಅಣಿಯಾಗಲು ಭಗವಂತನು ಸಹಾಯ ಮಾಡಲೆಂದು ಹಾರೈಸಿ ಈ ಲೇಖನವನ್ನು ಮುಗಿಸುತ್ತೇನೆ

## ಹೆಂಡದ ಮಹಿಮೆ

ಅಯ್ಯಯ್ಯೋ ಹಾಳಾಯಿತೀ ಭರತ ಖಂಡ
ಅಲ್ಲಲ್ಲಿ ಸುರುವಾಯ್ತು ಕುಡುಕುತನ ಹೆಂಡ ||ಅಯ್ಯಯ್ಯೋ||
ಎಲ್ಲಿ ನೋಡಿದರಲ್ಲಿ ಗುತ್ತಿಗೆಯ ಗೂಡು
ಕೆಟ್ಟು ಹೋಯಿತು ಇಂದು ಅಲ್ಲಲ್ಲಿ ನಾಡು
ಬೀದಿ ಬದಿಯಲಿ ಹೆಂಡದಂಗಡಿಯ ನೋಡಿ
ಕುಡಿವ ಚಟವನು ಕಲಿತು ಹಾಳಾಗಬೇಡಿ ||ಅಯ್ಯಯ್ಯೋ||
ಇಂದಿನ ಈ ಮಕ್ಕಳೆ ಮುಂದಿನ ಪ್ರಜೆಗಳು
ಕುಡುಕುತನವನು ಕಲಿತು ಹಾಳಾಗುತಿಹರು
ಎಳೆಯ ಶಿಶುಗಳ ತುಂಬಿ ಬೆಳೆವ ಸಂಸಾರ
ಹಾಳು ಮಾಡದೆ ಇರಲಿ ಈ ಮದ್ಯಸಾರ ||ಅಯ್ಯಯ್ಯೋ||
ಹೆಂಡ ಕುಡಿಯುವ ಎಲ್ಲ ಕಲಿತರ ನ್ಯಾಯ
ಕುಡಿದು ಆಡುವ ಮಾತಿಗೇನಿಹುದು ನ್ಯಾಯ
ಜಗಳ ಕಾಯುವುದೊಂದೆ ಸೇವಿಪ ಧ್ಯೇಯ
ಬಂಧುಗಳೆ ಸೋಲದಿರಿ ಕುಡಿದೀಕಸಾಯ ||ಅಯ್ಯಯ್ಯೋ||
ದುಡಿದು ತರುತಿರೆ ರೂಪಾಯಿ ದಿವಸಕ್ಕೈದಾರು
ಅದರಿಂದ ತರುತಿಹರು ಅಮಲಿನಾ ನೀರು
ಬರಿ ಹೊಟ್ಟೆ ಹಸಿವೆಂದು ಮಕ್ಕಳಳುತಿಹರು
ಹಾಳಾಗುತಿಹರೆ ಈ ನಾಡಿನ ಜನರು ||ಅಯ್ಯಯ್ಯೋ||
ಬಂಧುಗಳೆ ಈ ಅಮಲು ಸೇವನೆಯು ನಿಮಗೆ
ಕಹಿಯಾಗಿ ನಿಲ್ಲುವುದು ನೋಡಿ ನೀವೆ ಕೊನೆಗೆ
ಕುಡಿವ ಚಟದಿಂ ಬರುವ ಲಾಭವದು ಏನು
ತಲೆ ತಿರುಗಿ ಬೀಳುವುದೆ ಮತ್ತೆ ಇನ್ನೇನು ||ಅಯ್ಯಯ್ಯೋ||
ಸವಿದ ಅಮಲಿಗೆ ಎಲ್ಲ ವಸಡುಗಳ ಕಚ್ಚಿ
ಬೊಬ್ಬಿಟ್ಟು ಹೊರಳುವರು ಮೈ ಕವಚ ಬಿಚ್ಚಿ
ಹಣವಿಹುದು ಗುಣವಿಹುದು ಮಾನವಿದೆಯೇನು?
ಮಾನವಿಲ್ಲದ ಬಾಳು ಇದ್ದು ಸುಖವೇನು ||ಅಯ್ಯಯ್ಯೋ||
ಅಮಲಿಗಾಹುತಿಯಾಗಿ ಸಾಲವನೆ ಮಾಡಿ
ಸಾಲಿಗನೆ ಆಗುವಿರಿ ಕೊನೆಗೆ ನೀವು ನೋಡಿ
ಮನೆ ಮಾರು ಸಂಪತ್ತು ಎಲ್ಲವನು ಕೊಟ್ಟು
ಅಳಿಸಬೇಡಿರಿ ಮಾನ ಉಳಿಸಿ ಒಂದಿಷ್ಟು ||ಅಯ್ಯಯ್ಯೋ||
ಕೋಟಿ ಪುಣ್ಯಾದಿಗಳು ಜನಿಸಿದ ಊರು
ಬರಬರುತ ಆಗುತಿದೆ ಹೆಂಡದಾ ತವರು
ದೇಶ ಹಾಳಾಗುತಿದೆ ಮೋಸದಿಂದೆಲ್ಲ
ಭಾರತಾಂಬೆಗೆ ಕಳಂಕ ತಾರದಿರಿ ಎಲ್ಲ ||ಅಯ್ಯಯ್ಯೋ||

○ ರಚನೆ : ಹೊದ್ದೆಟ್ಟಿ ಭವಾನಿಶಂಕರ್

## ಅರೆಭಾಷೆ ಎಂಬ ಪದ ಅನರ್ಹವೆ ?

ಪ್ರಕೃತಿ ಎಂದು ಕರೆಯಿಸಿಕೊಳ್ಳಬೇಕಾದರೆ, ಅದರಲ್ಲಿ ಮನುಷ್ಯವರ್ಗ, ಪ್ರಾಣಿವರ್ಗ, ಪಕ್ಷಿವರ್ಗ, ಕ್ರಿಮಿಕೀಟಗಳವರ್ಗ ಹಾಗೂ ಜೀವಜಂತುಗಳ ವರ್ಗಗಳಿರುತ್ತವೆ. ಈ ಮೇಲೆ ಹೇಳಿದ ವರ್ಗಗಳು ಇರಬೇಕಾದರೆ ಜೊತೆಗೆ ಕಲ್ಲು–ಮಣ್ಣು, ಮರ-ಗಿಡ, ಬೆಟ್ಟ–ಗುಡ್ಡ, ಗಾಳಿ, ಬೆಳಕು ಮತ್ತು ನೀರು ಇರಲೇಬೇಕು. ಈ ರೀತಿಯ ಎಲ್ಲಾ ವಸ್ತುಗಳಿಂದ ಕೂಡಿದಾಗ ನಾವು ಪ್ರಕೃತಿ ಎಂದು ಕರೆಯುತ್ತೇವೆ. ಈ ಎಲ್ಲಾ ವರ್ಗಗಳಿಗೆ ಅವರದ್ದೇ ಆದ ಭಾಷೆಗಳಿವೆ. ಪ್ರತಿಯೊಂದು ವರ್ಗವು ಮನುಷ್ಯರಂತೆ ಮಾತನಾಡಿಕೊಳ್ಳುತ್ತವೆ. ಆಯಾಯ ಜಾತಿಗಳ ಭಾಷೆ ಆಯಾಯ ಜಾತಿಗಳಿಗೆ ಅರ್ಥವಾಗಬೇಕೇ ವಿನಃ ಬೇರೆಯವರಿಗೆಲ್ಲ ಅರ್ಥವಾಗುವುದಿಲ್ಲ. ಮನುಷ್ಯ ಜಾತಿಗಳಲ್ಲಿ ಸಾವಿರಾರು ಜಾತಿಗಳು, ಉಪಜಾತಿಗಳು, ಆ ಜಾತಿಗಳಲ್ಲಿ ಇನ್ನು ಸಹ ಜಾತಿಗಳು, ಆ ಸಹಜಾತಿಗಳಲ್ಲಿ ಹಲವಾರು ಮರಿಜಾತಿಗಳಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ನಾವು ನಮ್ಮ ಜಾತಿಯನ್ನು ಗೌಡ ಜಾತಿಯೆಂದೂ, ಆ ಗೌಡ ಜಾತಿಯಲ್ಲಿ ಅರೆಭಾಷೆ ಗೌಡರೆಂದೂ, ಅರೆಭಾಷೆ ಗೌಡರಲ್ಲಿ ಕೊಡಗಿನ ಅರೆಭಾಷೆ ಗೌಡರು ಹಾಗೂ ದಕ್ಷಿಣ ಕನ್ನಡ ಅರೆಭಾಷೆ ಗೌಡರೆಂದು ಗುರುತಿಸಿಕೊಳ್ಳುತ್ತೇವೆ. ಇಲ್ಲಿ ನಮಗೆ ಪ್ರಾಮುಖ್ಯವಾದುದು ಭಾಷೆ. ಅದೇ ನಮ್ಮ ಮಾತೃ ಭಾಷೆಯಾದ ಅರೆಭಾಷೆ.

ಅರೆಭಾಷೆ, ನಡುಗನ್ನಡ, ಗೌಡಕನ್ನಡ, ಹಳೆಗನ್ನಡ ಹಾಗೂ ಅರೆಗನ್ನಡ ಹೀಗೆಯೆ ಬೇರೆ ಬೇರೆ ಹೆಸರಿನಲ್ಲಿ ಕರೆಯಲು ಕೆಲವರು ಮುಂದಾಗಿರುವುದು ನಮಗೆ ತಿಳಿಯುತ್ತದೆ, ಆದರೆ ಇಂದು ಅರೆಭಾಷೆ ಎಂಬ ಪದ ಕೆಲವೇ ವ್ಯಕ್ತಿಗಳಿಂದ ವಿವಾದಕ್ಕೆ ಗುರಿಯಾಗಿದೆ. ನಾವು ಹುಟ್ಟಿನಿಂದ ಕಲಿತ ಮಾತೃ ಭಾಷೆಯೇ ಅರೆಭಾಷೆ, ಬೆಳೆದದ್ದೂ ಇದೇ ಭಾಷೆಯಲ್ಲಿ, ಸಂಸಾರಸ್ಥರಾಗಿರುವುದು ಇದೇ ಭಾಷೆಯಡಿಯಲ್ಲಿ. ನಮ್ಮ ಅಜ್ಜ–ಅಜ್ಜಿಯಂದಿರು ಕಾಲವಾಗುವವರೆಗೆ ಈ ಭಾಷೆಯನ್ನು ಅರೆಭಾಷೆಯೆಂದೇ ಕರೆಯುತ್ತಿದ್ದರು. ನಮ್ಮ ತಂದೆ ತಾಯಿಯಂದಿರು ಇವತ್ತಿನವರೆಗೆ ಅರೆಭಾಷೆಯೆಂದೇ ಕರೆಯುತ್ತಿರುವುದು. ನಮ್ಮ ಗೌಡ ಜನಾಂಗದಲ್ಲಿ ಶೇ. 99ರಷ್ಟು ಜನ ಅರೆಭಾಷೆಯೆಂದೇ ಕರೆಯುವರು. ನಾನು ಕೈಗೊಂಡ ಸಮೀಕ್ಷೆಯಂತೆ 25ಕ್ಕೆ 25 ಜನ ಅರೆಭಾಷೆಯೆಂದೇ ಅವರ ಅಭಿಪ್ರಾಯವನ್ನು ತಿಳಿಸಿರುತ್ತಾರೆ. ಹೀಗಿರುವಾಗ ನಮ್ಮದು ಹಳೆಗನ್ನಡ ಎಂದು ಇನ್ನಿತರ ಪದ ಬಳಸುವುದು ಎಷ್ಟು ಸರಿ? ಬಳಸಲಿ, ಯಾರ ಅಭ್ಯಂತರವಿಲ್ಲ. ಆದರೆ, ಬಳಸುವಂತ ಈ ಪದದ ಅರ್ಥವನ್ನು ಬಿಡಿಸಿ ನಾವು ಮಾತನಾಡುವ ಭಾಷೆ, ಕೆಲವು ವ್ಯಕ್ತಿಗಳು ಹೇಳುವ ಪದಕ್ಕೆ ಹೇಗೆ ಸರಿಹೊಂದುತ್ತದೆ ಎಂದು ಜನರಿಗೆ ಮನವರಿಕೆ ಮಾಡಬೇಕು. ಈ ರೀತಿಯ ಹೊಸ ಪದಗಳನ್ನು ಬಳಸುವಾಗ ಸಮಾಜದ ಮೇಲೆ ಅದರ ಪರಿಣಾಮವನ್ನು ಗುರುತಿಸಬೇಕು.

ಉದಾ : ದಿನಾಂಕ 12-4–1998ರಂದು ಮೈಸೂರಿನ ಕಲಾಮಂದಿರದಲ್ಲಿ ನಡೆದ ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಹೊರಗಿನಿಂದ ನೆಂಟರಿಷ್ಟರು ನಮ್ಮ ತವರೂರಿಂದ [ಕೊಡಗಿನಿಂದ] ಬಂದಿದ್ದರು. ಇವರಲ್ಲಿ ನಮಗಿಂತ ಹಿರಿಯರೂ, ಬುದ್ಧಿಜೀವಿಗಳೂ, ವಿದ್ಯಾವಂತರೂ ಆದ ದಾಮೋದರಗೌಡರು ಹಾಗೂ ಕುದುಕುಳಿ ಸುಬ್ಬಯ್ಯನವರು ಕಾರ್ಯಕ್ರಮದ ಮಧ್ಯೆ ಎದ್ದು ನಿಂತು ಗುಡ್ಡೆಮನೆ ರಮೇಶ್‌ರವರ ಭಾಷಣಕ್ಕೆ ಅರೆಭಾಷೆ ಪದದ ವಿಷಯದಲ್ಲಿ ಪ್ರತಿಭಟಿಸಿದ್ದು ಸಭೆಯಲ್ಲಿ ನೆರೆದಿದ್ದವರಿಗೆಲ್ಲ ತಿಳಿದವಿಷಯ. ಈ ಎರಡು ಜನರಿಂದ ನಮ್ಮಅರೆಭಾಷೆ ಪದವನ್ನು ಬಳಕೆಯಿಂದ ತೆಗೆದು ಹಾಕಬಹುದೇ? ಇದು ಸಾಧ್ಯವೇ? ಇಲ್ಲ! ಅವರ ಪ್ರತಿಭಟನೆಗೆ ವೇದಿಕೆ ಇದಾಗಿರಲಿಲ್ಲ. ಇದು ಸಾಂಸ್ಕೃತಿಕ ಕಾರ್ಯಕ್ರಮದ ವೇದಿಕೆ ಆಗಿತ್ತೆ ಹೊರತು ವೇದಿಕೆ ಇದಾಗಿರಲಿಲ್ಲ. ಇದು ಅವರಿಗೂ ಗೊತ್ತಿತ್ತು.

ಹೀಗಿದ್ದರೂ ಈ ಮಹನೀಯರ ವಾದವನ್ನು ನಾವು ತಿರಸ್ಕರಿಸುತ್ತೇವೆಂದಲ್ಲ. ಇವರ ವಾದಕ್ಕೆ ನಾವು ಕೈಯೆತ್ತಿ ಸಹಮತ ವ್ಯಕ್ತಪಡಿಸೋಣ. ಅದು ಎಲ್ಲಿ? ಯಾವಾಗ? ಯಾವ ವೇದಿಕೆಯಲ್ಲಿ? ಇದನ್ನು ಮೊದಲು ನಾವು ನಿರ್ಧರಿಸಿಕೊಳ್ಳಬೇಕು. ಸಾಧ್ಯವಾದರೆ ಇವರು ನಮ್ಮ ಗೌಡ ಜನಾಂಗದವರ ಅಭಿಪ್ರಾಯವನ್ನು ಸಂಗ್ರಹಿಸಿ ಗೌಡ ಜನಾಂಗದ ಬುದ್ಧಿ ಜೀವಿಗಳನ್ನೂ, ವಿದ್ಯಾವಂತರನ್ನೂ, ಸಮಾಜದ ಹಿರಿಯರನ್ನೂ, ನಮ್ಮ ಸಂಸ್ಕೃತಿ ಹಾಗೂ ಭಾಷೆಯಲ್ಲಿ ಹೆಚ್ಚಿನ ಪರಿಜ್ಞಾನ ಇರುವವರನ್ನು ಒಂದು ವೇದಿಕೆಗೆ ಕರೆತಂದು, ಅಲ್ಲಿ ಇದರ ಬಗ್ಗೆ ಚರ್ಚೆ ನಡೆದು ಒಮ್ಮತದ ನಿರ್ಣಯ ಕೈಗೊಂಡು, ಆಮೇಲೆ ಅವರು ಹೇಳಿದ ಹಾಗೆ ಎಲ್ಲಾ ಅರೆಭಾಷೆ ಗೌಡ ಜನಾಂಗದವರ ಸಹಕಾರದೊಂದಿಗೆ ಈ ಪದವನ್ನು ಬಳಸುವುದರಲ್ಲಿ ಯಾರ ಅಭ್ಯಂತರವೂ ಇಲ್ಲ. ಈ ಕೆಲಸ ಶೀಘ್ರವೇ ಆಗಬೇಕು. ಇಲ್ಲದೆ ಹೋದರೆ ಹೋದಲ್ಲಿ, ಬಂದಲ್ಲಿ, ಸಂಬಂಧವಿಲ್ಲದಲ್ಲಿ ಚರ್ಚೆ ನಡೆಸಿದರೆ, ಪ್ರತಿಭಟಿಸಿದರೆ ಅವರಿಗೆ ಸಿಗುವ ಉತ್ತರ ಶೂನ್ಯ. ಹೋದ ದಾರಿಗೆ ಸುಂಕವಿಲ್ಲದಂತೆ ಬರಬೇಕಾಗುತ್ತದೆ. ಇದು ಸತ್ಯವೂ ಹೌದು.

ಆದುದ್ದರಿಂದ ಮೇಲೆ ಹೆಸರಿಸಿರುವ ನಮ್ಮ ಜನಾಂಗದ ಹಿರಿಯರು ಈ ದಿನದಿಂದಲೇ ಈ ವಿಷಯದ ಬಗ್ಗೆ ಕಾರ್ಯಪ್ರವೃತ್ತರಾಗುತ್ತಾರೆಂದು ನಂಬಬಹುದೆ? ಇದರಿಂದಾಗಿ ನಮ್ಮ ಸಮಾಜದಲ್ಲಿ ಅಂಟಿಕೊಂಡಿರುವ ಜಡತ್ವ ತೊಲಗಿ ಹೊಸ ರೂಪ ಕೂಡಿಬರಲಿ, ಚರಿತ್ರೆಯಲ್ಲಿ ಇಂತವರ ಹೆಸರು ಮೆರೆಯಲಿ ಎಂದು ಅವರ ಯಶಸ್ಸಿಗೆ ಹಾರೈಸುತ್ತೇನೆ. ಆದರೆ ಒಂದು ವಿಷಯವೇನೆಂದರೆ, "ಅರೆಭಾಷೆ" ಎಂಬ ಪದ ಬಳಸಲು ಅನರ್ಹವೇ? ಓದುಗರೇ ಇದನ್ನು ತೀರ್ಮಾನಿಸಲಿ.

○ **ತಡಿಯಪ್ಪನ ಕುಮಾರಜಯ, ಮೈಸೂರ**

## ಯಶಸ್ಸು ನನಸಾಗಲು ಗುರಿ ಸ್ಪಷ್ಟವಾಗಿರಲಿ

**ಪ್ರಿಯ ವಿದ್ಯಾರ್ಥಿಗಳೇ,**

ಎಲ್ಲರಲ್ಲೂ ಸುಪ್ತವಾಗಿರುವ ದೈವತ್ವದ ಯುಕ್ತ ಅಭಿವ್ಯಕ್ತಿಯಿಂದ ಆತ್ಮಶಕ್ತಿಯ ವೀರರಾದ ಯೋಗ್ಯ ವ್ಯಕ್ತಿಗಳ ನಿರ್ಮಾಣ ಆಗಬಲ್ಲದು. ವಯಸ್ಸಾದಂತೆ ಜಗತ್ತನ್ನೇ ಉದ್ಧರಿಸುವ ಶಕ್ತಿ ಅಂತಹ ಮಹಾನುಭಾವರ ಕೈಯಲ್ಲೇ ಇರುವುದು ಖಾತ್ರಿಯಾಗುತ್ತದೆ. ಅಂತಹ ಹತ್ತು ಜನ ಸಮರ್ಥರು ದೊರೆತರೆ ಜಗತನ್ನೇ ನಾನು ಅಲುಗಾಡಿಸಬಲ್ಲೆ. ಆದರೆ ಅಂಥವರು ಎಲ್ಲಿದ್ದಾರೆ? ಎನ್ನುವ ಸ್ವಾಮಿ ವಿವೇಕಾನಂದರ ಈ ಮಾತು ಆತ್ಮಶಕ್ತಿಯ ವೈಭವವನ್ನು ಮೆರೆಯಿಸುವಂತೆಯೆ ಯುವಜನರ ಮೇಲೆ ಅವರಿಟ್ಟ ಭರವಸೆಯನ್ನು ಬಿಂಬಿಸುತ್ತದೆ. ಆತ್ಮ ಜಾಗೃತ ಯೋಗ್ಯ ವ್ಯಕ್ತಿ ನಿರ್ಮಾಣಕ್ಕಾಗಿಯೇ ತಮ್ಮ ಬಾಳನ್ನು ಸವೆಸಿದ್ದ ಅವರು ಆ ಉದ್ದೇಶಕ್ಕಾಗಿ ದೇಹಾಂತ್ಯವಾದ ಮೇಲೂ ಬಗೆಬಗೆಯಾಗಿ ಹೋರಾಡುವ ತಮ್ಮ ನಿರ್ಧಾರವನ್ನು ಸಾರಿದ್ದರು. ಪರೀಕ್ಷೆ ಸಮೀಪಿಸುತ್ತಿರುವಾಗ ಅದೆಷ್ಟೋ ವಿದ್ಯಾರ್ಥಿಗಳು ಸ್ಮರಣ ಸಕ್ತಿ ಹೆಚ್ಚಿಸುವ ಬಗೆ ಹೇಗೆ? ಅದ್ಭುತ ಯಶಸ್ಸು ಸಿಗಲು ಏನು ಮಾಡಬೇಕು ? ಏಕಾಗ್ರತೆಯ ಒಳಗುಟ್ಟೇನು ? ಎಂದೆಲ್ಲ ಚಿಂತಿಸುತ್ತಿರುತ್ತಾರೆ,

'ಏಳಿ, ಎದ್ದೇಳಿ! ಗುರಿ ಮುಟ್ಟುವತನಕ ನಿಲ್ಲದಿರಿ ! ಎಂದಿದ್ದ ಆ ಸ್ವಾಮಿ ವಿವೇಕಾನಂದರೆ ಇಂದು ಇಲ್ಲಿ 'ಏಳಿ, ಎದ್ದೇಳಿ! ದೃಡ ನಿರ್ಧಾರದ ಸತತ ಪ್ರಯತ್ನದಿಂದ ಅದ್ಭುತ ಯಶಸ್ಸನ್ನು ಸಾಧಿಸುವ ಧೀರರಾಗಿ'! ಎಂದು ವಿದ್ಯಾರ್ಥಿ ಯುವ ಜನಶಕ್ತಿಯನ್ನು ಬಡಿದೆಬ್ಬಿಸಬೇಕು. ಗೌಡ ವಿದ್ಯಾರ್ಥಿ ಸಾರಸ್ವತ ಲೋಕದ ಹೃದಯವನ್ನು ಮುಟ್ಟಿ ತಟ್ಟಲಿ! ಅವರಲ್ಲಿ ಸಾಹಸ–ಸಾಧನೆಗಳ ಕೆಚ್ಚನ್ನದು ಕೆಣಕಿ ಯಶಸ್ಸಿನ ಮುಂದಿನ ಯುಗಕ್ಕೆ ನಾಂದಿ ಹಾಡಲಿ.

ಯಾವಾಗಲೂ ಮಹಿಮೆ ಮಹಿಮೆಯನ್ನರಿಯಬಲ್ಲರೆನ್ನುತ್ತಾರೆ ತಿಳಿದವರು. ಅಪಾರ ಭಕ್ತಿ ಇರುವ ಶ್ರೇಷ್ಠ ಶಿಕ್ಷಕರಾಗಿ ವಿದ್ಯಾರ್ಥಿಗಳ ಬಾಳಿಗೆ ಬೆಳಕು ತರಲೆಂಬುದೇ ವಿದ್ಯಾಸಂಘದ ಗುರಿಯಾಗಿರಬೇಕು. ಹಸಿದವನಿಗೆ ಮೀನನ್ನು ಕೊಟ್ಟರೆ ಒಂದು ದಿನದ ಹಸಿವನ್ನು ನೀಗಿಸಿದಂತೆ, ಮೀನನ್ನು ಹಿಡಿಯುವುದನ್ನು ಕಲಿಸಿದರೆ ಶಾಶ್ವತವಾಗಿ ಹಸಿವನ್ನು ನೀಗಿಸಿದಂತೆ ಎಂಬ ಹಿರಿಯರ ಮಾತಿದೆ. ಹಾಗೆ ಮೀನನ್ನು ಹಿಡಿಯಲು ಕಲಿಸುವಂತೆ, ಎಲ್ಲಾ ಸಮಸ್ಯೆಗಳಿಗೂ ಪರಿಹಾರ ಒದಗಿಸಬಲ್ಲ ಆತ್ಮ ಶಕ್ತಿಯ ಜಾಗೃತಿಯ ಕಡೆಗೇ ಸಂಘದ ಒಲುವಾಗಿರಬೇಕು. ಆತ್ಮ ಶಕ್ತಿಯ ಜಾಗೃತಿಯಾಗಿ ಅಂತರ್ಯದ ಸರ್ವಶಕ್ತಿಯ ಅನುಭವ ವಿದ್ಯಾರ್ಥಿಗಾದಲ್ಲಿ ಎಂತಹ ಸಮಸ್ಯೆಯನ್ನು ಆತ ಲೀಲಾಜಾಲವಾಗಿ ಬಗೆಹರಿಸನೆಂಬುದು ಸತ್ಯ. ಸರ್ವರೋಗ ಪರಿಹಾರಿ ಸಂಜೀವಿನಿಯಂತೆ ಆತ್ಮಶಕ್ತಿ ಜಾಗೃತಿಯೇ ಎಲ್ಲಾ ಸಮಸ್ಯೆಗಳಿಗೆ ಉತ್ತರ ಎಂಬುದನ್ನರಿತು ಆತ್ಮ ಶಕ್ತಿ ಜಾಗೃತಿಗೆ ವಿದ್ಯಾರ್ಥಿಗಳೆಲ್ಲಾ ಮನಸ್ಸು ಮಾಡಬೇಕು. ಪೂರ್ತಿ ವಿಚಾರಗಳನ್ನು ಅರಗಿಸಿಕೊಂಡು ಅನುಷ್ಠಾನಕ್ಕೆ ತರಬೇಕು. ಆಗಲೇ ನಮ್ಮ ಹಿರಿಯರು ಕಂಡ ಯಶಸ್ಸಿನ ಕನಸು ನನಸಾಗಬಲ್ಲದು. ಅಂತಹ ಯಶಸ್ಸಿನ ಕಲಿಗಳ ಸಂತಾನ ವೃದ್ಧಿಯಾದಾಗಲೇ ಈ ಜನ ಗೌಡ ಜನಾಂಗದ ಸಾರ್ಥಕ್ಯವಾದಂತೆನ್ನಬೇಕು.

ಅದನ್ನು ಮಾಡಬೇಕು, ಇದನ್ನು ಮಾಡಬೇಕು, ಬೇಕು... ಬೇಕು ಎಂದೆಲ್ಲಾ ಎಲ್ಲವನ್ನೂ ಎಣಿಸಿಕೊಳ್ಳುವುದೇನೊ ಸರಿ. ಆದರೆ ಅದನ್ನೆಲ್ಲಾ ಮಾಡಲು ಸಮಯವಿದ್ದೀತೆ ? ಸಿಕ್ಕೀತೆ ? ಆಯುಷ್ಯವಂತೂ ಭರದಿಂದ ಕಳೆದೇ ಹೋಗುತ್ತಿದೆ. ದಿನವೂ ನಾವು ಹಳಬರಾಗಿ ಸಾವಿಗೆ ಸಮೀಪರಾಗುತ್ತಿದ್ದೇವೆ. ಹಾಗಿರುವಾಗ ಇಂದಾಗದೆ ಇರುವುದು ನಾಳೆ ಕೈಗೂಡುವುದು ಸಾಧ್ಯವೇ ? ಹೇಳಿ. ಇಂದಿನ ಅರ್ಹತೆ ಪಂದ್ಯದಲ್ಲಿ ಗೆಲ್ಲದವರು ನಾಳಿನ ಪಂದ್ಯದಲ್ಲಿ ಭಾಗವಹಿಸುವುದು ಹೇಗೆ? ಯುವಶಕ್ತಿಯೇ,ಆದ್ದರಿಂದ ಇಂದು ಮಾಡಬೇಕೆಂದೆನಿಸಿದುದನ್ನು ಇಂದೇ ಚೆನ್ನಾಗಿ ಮಾಡಿ ಮುಗಿಸಿ! ನಿಮ್ಮ ದೈವ ಪ್ರೇರಣೆಯ ಕ್ರಿಯಾ ಶಕ್ತಿಯು ದೃಡ ಇಚ್ಛಾಶಕ್ತಿಯನ್ನು ಬೆಂಬತ್ತಿಯೇ ಸಾಗಲಿ. ಆಗಲೇ ಮಹಾತ್ ಸಾಹಸ-ಸಾಧನೆಯ ಕನಸು ನನಸಾಗುವುದು. ಗೌಡ ಜನಾಂಗದ ಮುಖವಾಣಿಯಾದ ಭವಿಷ್ಯದ ಮುದ್ದು ವಿದ್ಯಾರ್ಥಿಗಳೆ ಹಿರಿಯರ ಮಾರ್ಗದರ್ಶನದಿಂದ ಮುನ್ನಡೆದರೆ, ಮುಂದೆ ನೀವೆ ಜನಾಂಗದ ಆಸ್ತಿಯಾಗಿ ಮಾರ್ಪಟ್ಟರೆ ಸಮಾಜಕ್ಕೆ ಇನ್ನೇನು ಬೇಕು?

● ಪಟ್ಟಡ ಪ್ರಭಾಕರ

---

## ಸರ್ವಜ್ಞ ಧಾರೆ

ಎಲ್ಲ ಬಲ್ಲವರಿಲ್ಲ! ಬಲ್ಲಿದರು ಬಹಳಿಲ್ಲ!
ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯ!
ಎಲ್ಲರಿಗೂ ಇಲ್ಲ ಸರ್ವಜ್ಞ॥

ಸರ್ವಜ್ಞನೆಂಬುವನು ಗರ್ವದಿಂದಾದವನೆ!
ಸರ್ವರೊಳು ಒಂದೊಂದು ನುಡಿಗಲಿತು ವಿದ್ಯದ!
ಪರ್ವತವೇ ಆದ ಸರ್ವಜ್ಞ॥

ಒಬ್ಬನಲ್ಲದೆ ಜಗಕ್ಕೆ! ಇಬ್ಬರುಂಟೆ ಮತ್ತೆ!
ಒಬ್ಬ ಸರ್ವಜ್ಞ ಕರ್ತನೀ ಜಗಕ್ಕೆಲ್ಲ!
ಒಬ್ಬನೇ ದೈವ ಸರ್ವಜ್ಞ॥

ಭೃಷ್ಟ ದೈವಕೆ ಬಾಯ! ಬಿಟ್ಟಲ್ಲಿ ಫಲವಿಲ್ಲ!
ಸೃಷ್ಟಿಗೀಶ್ವರನ ಭಜಿಸಿದರೆ ಮುಂದಕೆ!
ಇಷ್ಟಾರ್ಥವೀವ ಸರ್ವಜ್ಞ॥

○ ಸಂಗ್ರಹ : ಸಂಗಾತಿ

# ಕೊಡಗಿನ ಭರವಸೆಯ ಕ್ರೀಡಾಪಟು ತ್ಯಾಗರಾಜೇಂದ್ರ

ಗ್ರಾಮೀಣ ಮಟ್ಟದಿಂದ ಹಿಡಿದು ರಾಷ್ಟ್ರ ಮಟ್ಟದ ವಿವಿಧ ಅಥ್ಲೆಟಿಕ್ ಸ್ಪರ್ಧೆಯಲ್ಲಿ ಭಾಗವಹಿಸಿ ಜಿಲ್ಲೆಯ ಕೀರ್ತಿ ಪತಾಕೆಯನ್ನು ಹಾರಿಸಿದ ಭರವಸೆಯ ಕ್ರೀಡಾಪಟು ಮದೆನಾಡು ಗ್ರಾಮದ ತ್ಯಾಗರಾಜೇಂದ್ರ. ಪ್ರಾಥಮಿಕ ಶಾಲಾ ಹಂತದಲ್ಲಿರುವಾಗಲೇ ಈತ ರಿಲೇ ಓಟದ ಸ್ಪರ್ಧೆಗಳಿದು ಬಹುಮಾನ ಪಡೆದುಕೊಂಡ ಕ್ರೀಡಾಳು.

ಈತನ ಸಾಧನೆಯ ಹಿಂದೆ ಅಡಗಿರುವ ಒಳಗುಟ್ಟನ್ನು ಹೊರಗೆಡವಲು ಬಯಸಿ ಈ ಪ್ರತಿನಿಧಿ ಕ್ರೀಡಾಪಟುವನ್ನು ಸಂದರ್ಶಿಸಿದಾಗ ಈ ಕೆಳಗಿನಂತೆ ತನ್ನ ಮನದಾಳದ ಇಂಗಿತನ್ನು ವ್ಯಕ್ತ ಪಡಿಸಿದ.

ನನ್ನ ತಂದೆ ಹುದೇರಿ ರಾಜೇಂದ್ರ, ತಾಯಿ ಭಾಗೀರಥಿ. ನನಗೆ ಓಟದ ಸ್ಪರ್ಧೆಯ ರಹಸ್ಯ ನನ್ನ ತಂದೆಯಿಂದ ದೊರೆತ ಬಳವಳಿ. ಅವರು ಈಗಲೂ ಕೆಸರು ಗದ್ದೆ ಓಟದಲ್ಲಿ ನಿಸ್ಸೀಮರು. ಅವರ ಈ ಪ್ರೊತ್ಸಾಹದ ಹಿನ್ನೆಲೆಯಲ್ಲಿ ಪ್ರೌಢ ಶಾಲೆ ಮತ್ತು ಪಿ.ಯು.ಸಿ. ವ್ಯಾಸಂಗ ಮಾಡುತ್ತಿರುವಾಗ ಜಿಲ್ಲಾ ಮಟ್ಟದ ಪುರುಷರ 200 ಮತ್ತು 400 ಮೀ. ಓಟದಲ್ಲಿ ಮೊದಲಿಗನಾದೆ. ಇದರಿಂದ ಉತ್ತೇಜನಗೊಂಡು ಇನ್ನೂ ಹೆಚ್ಚಿನ ಅಭ್ಯಾಸದಲ್ಲಿ ತೊಡಗಿದೆನೆನ್ನುತ್ತಾನೆ ಈ ತ್ಯಾಗರಾಜೇಂದ್ರ.

ಕೊಡಗಿನ ಸಾಂಸ್ಕೃತಿಕ ಸ್ಪರ್ಧೆಗಳಲ್ಲೊಂದಾದ ಕೆಸರುಗದ್ದೆ ಓಟದ ಕುರಿತು ತ್ಯಾಗರಾಜೇಂದ್ರನ ವಿವರಣೆ ಬಯಸಿದಾಗ, ಕಗ್ಗೋಡ್ಲುವಿನಲ್ಲಿ ನಡೆದ ರಾಜ್ಯ ಮಟ್ಟದ ಮುಕ್ತ ಪುರುಷರ ವಿಭಾಗದ ಓಟದಲ್ಲಿ ಪ್ರಥಮ ಸ್ಥಾನಗಳಿಸಿದೆ, ಈ ಓಟವು ಒಂದು ರೋಮಾಂಚನ ನೀಡಿತು. ಗದ್ದೆಯಲ್ಲಿ ಓಡುವಾಗ ಬೀಳುವ ಸಾಧ್ಯತೆ, ಕೆಸರು ನೀರಿನ ಸಿಂಚನದಿಂದ ಮೈಯೆಲ್ಲ ಪುಳಕಿತಗೊಳ್ಳುತಿತ್ತು ಎಂದು ನುಡಿದನು.

ಗದ್ದೆಯಲ್ಲಿ ಯಾವ ಭಾಗದಲ್ಲಿ ಆಳವಿರುತ್ತದೆ ಎನ್ನುವುದರ ಪರಿವೇ ಇರುವುದಿಲ್ಲ. ಓಟದ ಹಿಡಿತ ತಪ್ಪುವ ಸಾಧ್ಯತೆ ಇರುತ್ತದೆ. ಇದೆಲ್ಲವನ್ನು ನಿಭಾಯಿಸಿಕೊಂಡು ಆರಂಭದಿಂದಲೇ ಮುನ್ನಡೆಯಲ್ಲಿದ್ದರೆ ಗೆಲುವು ಖಚಿತ ಎಂದು ತ್ಯಾಗರಾಜೇಂದ್ರ ತನ್ನ ಸಾಧನೆಯ ಹಿಂದಿರುವ ಗುಟ್ಟನ್ನು ಬಿಚ್ಚುಮನಸ್ಸಿನಿಂದ ನುಡಿದ.

ಈ ಹಿಂದೆ ರಾಜ್ಯ ಮಟ್ಟದ ಅಥ್ಲೆಟಿಕ್ಸ್ ಸ್ಪರ್ಧೆಯ 400 ಮೀ. ಓಟದಲ್ಲಿ ಪ್ರಥಮ ಸ್ಥಾನ, ಕೊಚ್ಚಿನ್‌ನಲ್ಲಿ ನಡೆದ ರಾಷ್ಟ್ರ ಮಟ್ಟದ 4 x 100 ಮೀ. ರಿಲೇಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದೆ. ಇದರಲ್ಲಿ ದ್ವಿತೀಯ ಸ್ಥಾನ ಹಾಗೂ ಬಿಸ್ಲೆರಿ ಕಂಪನಿಯು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ರಾಜ್ಯ ಮಟ್ಟದ 100 ಮೀ. ಓಟದಲ್ಲಿ ತೃತೀಯ ಬಹುಮಾನವನ್ನು ಪಡೆದುಕೊಂಡಿರುವ ಬಗ್ಗೆ ವಿವರಣೆ ನೀಡಿದ.

ನನ್ನ ಈ ಎಲ್ಲಾ ಸಾಧನೆಗೆ ಪೋಷಕರು, ಕೊಡಗು ವಿದ್ಯಾಲಯದ ತರಬೇತುದಾರರಾದ ರವಿ ಮತ್ತು ಹರೇಂದ್ರ ಭಾಸ್ಕರ್ ಇವರುಗಳು ಅತ್ಯಂತ ಉತ್ತೇಜನ ನೀಡಿದ್ದಾರೆ. ಸೋಲು ಗೆಲುವಿನ ದಾರಿಯನ್ನು ತೋರಿಸುತ್ತದೆ. ಸೋಲೆ ಗೆಲುವಿನ ಸೋಫಾನ ಎಂಬ ನಾಣ್ನುಡಿಯನ್ನು ತ್ಯಾಗರಾಜೇಂದ್ರ ಅಳವಡಿಸಿಕೊಂಡಿರುವುದಾಗಿ ನುಡಿಯುತ್ತಾನೆ.

ಈತನ ಸಹೋದರಿ ಗಾನರಾಜೇಂದ್ರ ಕೂಡ ಅತ್ಯುತ್ತಮ ಕೆಸರು ಗದ್ದೆ ಓಟದ ಸ್ಪರ್ಧಾಳು. ಸಹೋದರಿಯ ಸಾಧನೆಯಿಂದ ಪ್ರೇರಿತನಾಗಿ ಓಟದ ಗೀಳನ್ನು ಹಚ್ಚಿಕೊಂಡಿರುವುದಾಗಿ ತ್ಯಾಗರಾಜೇಂದ್ರ ಹೇಳುತ್ತಾನೆ.

ಜಿಲ್ಲೆಯ ಕ್ರೀಡಾ ಕ್ಷೇತ್ರದಲ್ಲಿ ಮಿಂಚಿ, ರಾಷ್ಟ್ರ ಮಟ್ಟದವರೆಗೂ ತನ್ನ ಸಾಧನೆಯನ್ನು ತೋರಿಸುತ್ತಿರುವ ತ್ಯಾಗರಾಜೇಂದ್ರನಿಗೆ ಇನ್ನೂ ಹೆಚ್ಚಿನ ಸ್ಪರ್ಧೆಗಳಲ್ಲಿ ಅತ್ಯುತ್ತಮ ಸ್ಥಾನ ದೊರೆತು ಅಂತರಾಷ್ಟ್ರೀಯಮಟ್ಟದಲ್ಲಿ ಕೊಡಗಿನ ಕೀರ್ತಿ ಪತಾಕೆಯನ್ನು ಹಾರಿಸಲೆಂದು ಆಶೀಸೋಣ.

○ ಸಂದರ್ಶನ : **ಬಾರಿಯಂಡ ಆರ್. ಜೋಯಪ್ಪ, ಮದೆ**

## ಕವನ

### ಸಮಾಜ ಸೇವಕ

ದಾರಿಯಲ್ಲಿ ತಲೆ ತಿರುಗಿ ಬಿದ್ದ
ಮುದುಕನನ್ನು ಕಣ್ಣೆತ್ತಿಯೂ
ನೋಡದ ಯುವಕನೊಬ್ಬ
ಯುವತಿಯೊಬ್ಬಳ ಕೈವಸ್ತ್ರ ಬಿದ್ದಾಗ
ನಯವಾಗಿ ಎತ್ತಿಕೊಟ್ಟು
"ಸಮಾಜ ಸೇವಕ" ಎಂದು ಕೊಂಡ

○ ಕಾನಹಿತ್ಲು ನಳಿನಿ ನಂಜಪ್ಪ, ಕುಶಾಲನಗರ

## ನಗೆಹನಿ – ಒಂದೂ ಗೊತ್ತಿಲ್ಲ

ಅಪ್ಪ - ಪುಟ್ಟ, ನಾಳೆ ವಿಜ್ಞಾನ ಪರೀಕ್ಷೆಗೆ ಎಲ್ಲಾ ಕಲ್ತಿದ್ದೀಯ"
ಪುಟ್ಟ – ಕಲ್ತಿದ್ದೀನಿ ಅಪ್ಪ.
ಅಪ್ಪ – ಕರೆಂಟನ್ನು ಕಂಡು ಹಿಡಿದವರು ಯಾರು ?
ಪುಟ್ಟ – ಕರೆಂಟನ್ನು ಎಲ್ಲರೂ ಕಂಡಿದ್ದಾರೆ. ಆದರೆ, ಅದನ್ನು ಹಿಡಿದವರು ಯಾರು ಇಲ್ಲ. ಹಿಡಿದರೆ ಶಾಖ್ ಹೊಡೆಯುತ್ತದೆ. ಈ ಅಪ್ಪನಿಗೆ ಒಂದೂ ಗೊತ್ತಿಲ್ಲ.

○ ಜಯಲಕ್ಷ್ಮಿ ಪಿ.ಆರ್. ಸಿದ್ದಾಪುರ

## ಯುವ ಜನಾಂಗಕೊಂದು ಕಿವಿಮಾತು

ಯುವ ಜನಾಂಗವೆಂದರೆ ಜನಾಂಗಕ್ಕೂ ದೇಶಕ್ಕೂ ಅದೊಂದು ಅದ್ಭುತ ಶಕ್ತಿ. ಆ ಶಕ್ತಿಯನ್ನು ಒಳ್ಳೆಯ ದಾರಿಯಲ್ಲಿ ಉಪಯೋಗಿಸಿದರೆ ಶ್ರೇಯಸ್ಸು. ನಿಯಂತ್ರಣವಿಲ್ಲದೆ ಉಪಯೋಗಿಸಿದರೆ ಅಧೋಗತಿ.

ಯಾವುದೇ ಜನಾಂಗದ ಉನ್ನತಿಯೆಂದರೆ ಅದಕ್ಕೆ ಹಣದ ಅಡಚಣೆ ಇರಬಾರದು. ಹಣವು ನಾವು ನೆನೆಸಿದಷ್ಟು ಬರುವುದಿಲ್ಲ. ಬಂದದ್ದನ್ನು ಜಾಣತನದಲ್ಲಿ ಉಪಯೋಗಿಸುವುದರಲ್ಲಿ ನಮ್ಮ ಯಶಸ್ಸು ನಿಂತಿದೆ. ಆದ್ದರಿಂದ :–

1. ಹಣವನ್ನು ದುರುಪಯೋಗ ಮಾಡುವುದು ದುಷ್ಕೃತ್ಯ. ಹಣವನ್ನು ವೃತಾ ಖರ್ಚು ಮಾಡಬೇಡಿ. ಹಣವನ್ನು ಹೊಗೆಬತ್ತಿ ಸೇವನೆ, ಮಾದಕ ವಸ್ತು ಸೇವನೆ, ಗುಟ್ಕಾಗಳಂತ ನಿಶಾ ಸೇವನೆಯನ್ನು ದಯವಿಟ್ಟು ಕಲಿಯಬೇಡಿ, ಕಲಿಸಬೇಡಿ.

2. ಆಹಾರ ಸೇವನೆ. ನಾವು ದೇವರನ್ನು ಪ್ರಾರ್ಥಿಸುತ್ತೇವೆ. ಪ್ರಾರ್ಥನೆಯಲ್ಲಿ ಆಹಾರವೂ ಒಂದು. ಅಂದರೆ ಅನ್ನವೂ ದೇವರೆ. ಆಹಾರವನ್ನು ಬೇಕಾದಷ್ಟು ಮಾತ್ರ ಸೇವಿಸಿ ಅನಾವಶ್ಯಕ ವ್ಯರ್ಥ ಮಾಡಬೇಡಿ. ಸಭೆ ಸಮಾರಂಭಗಳಲ್ಲಿ, ಸ್ವಂತ ಮನೆಯಲ್ಲಿ ಆಹಾರವನ್ನು ಮಿತವಾಗಿ ಬಳಸಿ, ಅನ್ನವನ್ನು ಬಿಸಾಕುವುದು ದೇವರನ್ನು ಕಡೆಗಣಿಸಿದಂತೆ. ಯುವ ಜನಾಂಗ ಇದನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

3. ಸಮಯ ಪ್ರಜ್ಞೆ : ಸಮಯದ ಬೆಲೆ ಕಟ್ಟಲಿಕ್ಕಾಗದು. ನಮ್ಮ ಜೀವಮಾನವೇ ಸಮಯದಲ್ಲಿದೆ. ಸಮಯವೇ ನಮ್ಮ ಜೀವಮಾನ. ಸಮಯವನ್ನು ಅತ್ಯಂತ ಎಚ್ಚರಿಕೆಯಲ್ಲಿ ಕಾಪಾಡಿ. ಕಳೆದುಹೋದ ಸಮಯ ಮರಳಿ ಬಾರದು.

4. ಚೈತನ್ಯ (ವೀರ್ಯ ಸಾಮರ್ಥ್ಯ) : ಚೈತನ್ಯ ಮಾನವನಿಗೆ ದೇವರು ಕೊಟ್ಟ ದೊಡ್ಡ ಮಹತ್ವವಾದ ವರದಾನ. ನಮ್ಮ ಪ್ರತಿಯೊಂದು ಕರ್ತವ್ಯದಲ್ಲಿ ಚೈತನ್ಯ ಅಡಗಿದೆ. ನಮ್ಮ ನೋಟ, ಕೇಳುವಿಕೆ, ಮಾತು, ಯೋಚನೆಗಳಲ್ಲಿ ಚೈತನ್ಯ ಅಡಗಿದೆ. ಆದ್ದರಿಂದ ಚೈತನ್ಯವನ್ನು ತನ್ನ ಒಳಿತಿಗೆ, ತನ್ನ ಸಮಾಜದ ಒಳಿತಿಗೆ ಉಪಯೋಗಿಸಬೇಕು.

5. ಪ್ರೀತಿ : ಪ್ರೀತಿಯೆಂಬುದು ಮೋಹವಲ್ಲ. ಮೋಹವೆಂಬುದು ಚರ್ಮದ ಮೇಲಿನ ಪ್ರೀತಿ. ಪ್ರೀತಿಗಾಗಿ ಮೋಹದಲ್ಲಿ ಕಾಮ ಅಡಗಿದೆ. ಮಾತೃಹೃದಯದ ಸಿರಿವಂತಿಕೆಯೆ ಪ್ರೀತಿ. ಪ್ರೀತಿಯಲ್ಲಿ ಕೂಡುವುದು, ಪಡೆಯುವುದು ಪ್ರೀತಿ ಮಾತ್ರ. ದುರುಪಯೋಗ ಬೇಡ.

6. ಸಹವಾಸ : ಸಹವಾಸದಲ್ಲಿ ಸಂತಸವು ಇದೆ, ದೋಷವೂ ಇದೆ. ಆದ್ದರಿಂದ ತನ್ನ ಮತ್ತು ತನ್ನ ಸಮಾಜದ ಒಳಿತಿಗಾಗಿ ಸಹವಾಸ ಬೇಕು. ಒಳ್ಳೆಯ ಸಹವಾಸವಿರಲಿ.

ಒಬ್ಬ ಹಾಳಾದರೆ ಸಮಾಜ ಹಾಳಾಗುವುದಿಲ್ಲ. ಆದರೆ ಸಮಾಜ ಹಾಳಾದರೆ ಸರ್ವನಾಶ. ನಮಗಿಂತ ಸಮಾಜ ಮೇಲು. ಸಮಾಜದ ಉದ್ಧಾರಕ್ಕೆ, ಸಮಾಜದ ಒಳಿತಿಗಾಗಿ ಮಾತ್ರ ನಮ್ಮ ಬುದ್ಧಿ, ಹಣ, ಆಹಾರ, ಸಮಯಪ್ರಜ್ಞೆ, ಚೈತನ್ಯ ಮತ್ತು ಪ್ರೀತಿ. ಅನ್ಯ ಸಮಾಜವನ್ನು ದ್ವೇಷಿಸುವುದು ನಮ್ಮನ್ನು ನಾವು ದ್ವೇಷಿಸಿದಂತೆ.

● ಚೇಂದ್ರಿಮಾಡ ಜಿ. ಮುತ್ತಪ್ಪ
ಕುಶಾಲನಗರ.

---

## 1997–98ರ ರಾಷ್ಟ್ರಮಟ್ಟದ ಪ್ರಬಂಧ ಸ್ಪರ್ಧೆಯಲ್ಲಿ ಸಬ್ಬಂಡ್ರ ಕೆ. ಶೈಲಜ ಪ್ರಥಮ

ಅಸ್ಸಾಮಿನ ಸೋಹನ್‌ಲಾಲ್ ನೇಮಿಚಂದ್ ಕೊಠಾರಿ ಸಂಸ್ಥೆಯು ಏರ್ಪಡಿಸಿದ್ದ ರಾಷ್ಟ್ರ ಮಟ್ಟದ ಪ್ರಬಂಧ ಸ್ಪರ್ಧೆಯಲ್ಲಿ ಎಸ್. ಕೆ. ಶೈಲಜ ಪ್ರಥಮ ಸ್ಥಾನ ಪಡೆದಿದ್ದಾರೆ.

ಮಡಿಕೇರಿಯ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜಿನಲ್ಲಿ ಅಂತಿಮ ಬಿ.ಎ. ಯಲ್ಲಿ ವ್ಯಾಸಂಗ ಮಾಡುತ್ತಿರುವ ಶೈಲಜ, ಸುಂಟಿಕೊಪ್ಪ ನಿವಾಸಿ ಸಬ್ಬಂಡ್ರ ಕುಶಾಲಪ್ಪ ಹಾಗೂ ಚಿನ್ನಮ್ಮನವರ ಪುತ್ರಿ. ಇವರು ಮೂಲತಃ ಮಡಿಕೇರಿ ತಾಲ್ಲೂಕು, ಮಕ್ಕಂದೂರು ಗ್ರಾಮದವರು. ಇವರ "ವರದಕ್ಷಿಣೆ ಪದ್ಧತಿ" ಎಂಬ ಪ್ರಬಂಧಕ್ಕೆ ಪ್ರಥಮ ಬಹುಮಾನ ದೊರೆತಿದೆ. ಇವರಿಗೆ ಇದೇ ರೀತಿ ಇನ್ನೂ ಹೆಚ್ಚಿನ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಪ್ರಶಸ್ತಿಗಳಿಸುವ ಚೈತನ್ಯವನ್ನು ದೇವರು ಅನುಗ್ರಹಿಸಲೆಂದು 'ಸಂಗಾತಿ' ತುಂಬು ಹೃದಯದಿಂದ ಹಾರೈಸುತ್ತದೆ. ○



ಎಸ್. ಕೆ. ಶೈಲಜ

---

### ಕಾರಣ

ನನ್ನ ಕನಸುಗಳಿಗೆ
ಅದ್ಯಾಕೋ ಇಲ್ಲ ಸಾವು !
ಕಾರಣ, ನಾ ಆಗಾಗ್ಗೆ
ಕೊಡುವೆನು ಪುಷ್ಟಿಕರ ಮೇವು ॥

# ಸಮರ್ಪಕ ಭೋಜನ ವ್ಯವಸ್ಥೆ – ಸಲಹೆ, ಸೂಚನೆಗಳು

ಭೋಜನ (ಊಟ, ತಿಂಡಿ ಇತ್ಯಾದಿ) ಹೆಚ್ಚಿನೆಲ್ಲಾ ಸಭೆ, ಸಮಾರಂಭಗಳ ಒಂದು ಅವಿಭಾಜ್ಯ ಅಂಗ. ಆಗಮಿಸಿದ ಅತಿಥಿಗಳಿಗೆ, ಆಹ್ವಾನಿತರಿಗೆ ಆಹಾರ, ಪಾನೀಯ ನೀಡಿ ಸತ್ಕರಿಸುವುದು ಭಾರತೀಯ ಸಂಪ್ರದಾಯ.

ನಮ್ಮ ಜನಾಂಗದ ಸಭೆ ಸಮಾರಂಭಗಳ ಭೋಜನ ವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ಈ ಲೇಖನ ಬರೆಯಲಾಗಿದೆ. ನಮ್ಮ ಸಭೆ ಸಮಾರಂಭಗಳ ಭೋಜನ ವ್ಯವಸ್ಥೆಯು ಸಾಕಷ್ಟು ತೃಪ್ತಿಕರವಾಗಿರುವುದು ಸಂತೋಷದ ವಿಚಾರ. ಆದರೂ ಕೆಲವೊಂದು ಲೋಪದೋಷಗಳಿದ್ದು, ಸೂಕ್ತ ಕ್ರಮ ಕೈಗೊಂಡಲ್ಲಿ ಅವುಗಳನ್ನು ತಪ್ಪಿಸಲು ಸಾಧ್ಯವಿದೆ.

ಮೊದಲನೆಯ ದೊಡ್ಡ ತೊಂದರೆಯೆಂದರೆ, ಭೋಜನಕ್ಕೆ ಆಹ್ವಾನ ನೀಡಿದಾಗ ನಡೆಯುವ ನೂಕುನುಗ್ಗಲು. ಇದನ್ನು ತಪ್ಪಿಸಲು ಖಂಡಿತಾ ಸಾಧ್ಯವಿದೆ. ಆಹ್ವಾನಿತರುತಾವೇ ಮೊದಲು ಊಟ ಮಾಡಬೇಕು ಎಂಬ ಮನೋಭಾವವನ್ನು ದೂರವಿಡಬೇಕು. ಯಾವ ವ್ಯಕ್ತಿಗಳು ಅನ್ಯ ಕಾರ್ಯ ನಿಮಿತ್ತ ಅವಸರದಲ್ಲಿರುತ್ತಾರೋ ಅವರಿಗೆ ಮೊದಲು ಭೋಜನಕ್ಕೆ ಅವಕಾಶ ಮಾಡಿಕೊಡಬೇಕು. ತಮ್ಮ ಊಟ, ತಿಂಡಿಯಾದ ತಕ್ಷಣ ಜಾಗದಿಂದೆದ್ದರೆ ಅನ್ಯರಿಗೆ ಭೋಜನಕ್ಕೆ ಕುಳಿತುಕೊಳ್ಳಲು ಅನುಕೂಲವಾಗುವುದು. ಅದೇ ರೀತಿ ಮಕ್ಕಳು, ಹೆಂಗಸರು ಮತ್ತು ವೃದ್ಧ ಪ್ರಾಯದಲ್ಲಿರುವವರಿಗೆ ಮೊದಲು ಭೋಜನ ಸ್ವೀಕರಿಸಲು ಅವಕಾಶ ಮಾಡಿಕೊಡಬೇಕು.

ತಾವು ಊಟ, ತಿಂಡಿಗೆ ಕುಳಿತ ಸ್ಥಳವನ್ನು ಪ್ರತಿಯೊಬ್ಬರೂ ಸಾಧ್ಯವಾದಷ್ಟು ಮಟ್ಟಿಗೆ ಸ್ವಚ್ಛವಾಗಿಡಬೇಕು. ಇದರಿಂದ ಉಳಿದವರ ಭೋಜನಕ್ಕೆ ಹೆಚ್ಚು ಅನುಕೂಲವಾಗುವುದು. ಮಾತ್ರವಲ್ಲದೆ ಸಮಾರಂಭದ ವ್ಯವಸ್ಥಾಪಕರಿಗೂ ಕಡಿಮೆ ಅವಧಿಯಲ್ಲಿ ಹಾಗೂ ಸುಲಭವಾಗಿ ಜಾಗವನ್ನು ಸ್ವಚ್ಛಗೊಳಿಸಲು ಸಾಧ್ಯವಾಗುವುದು.

ಭೋಜನ ಸ್ಥಳದಲ್ಲಿ ಹೆಂಗಸರು, ಮಕ್ಕಳಿಗೆ ಬೇರೆ ಆಸನ ವ್ಯವಸ್ಥೆಯನ್ನು ಮಾಡಿದರೆ ಬಹಳ ಅನುಕೂಲವಾಗುವುದು. ಅದೇ ರೀತಿ ಹೆಂಗಸರಿಗೆ ಹೆಂಗಸರು ಮತ್ತು ಗಂಡಸರಿಗೆ ಗಂಡಸರು ಊಟ ತಿಂಡಿ ಬಡಿಸುವುದು ಎಲ್ಲಾ ದೃಷ್ಟಿಯಿಂದಲೂ ಸೂಕ್ತವಾದುದು. ಭೋಜನ ಸಮಯದಲ್ಲಿ ಮದ್ಯಪಾನ ಮಾಡಲು ಬಯಸುವವರನ್ನು ಪ್ರತ್ಯೇಕವಾಗಿರಿಸಿ ಅವರಿಗೆ ಪ್ರತ್ಯೇಕವಾಗಿ ಊಟ, ತಿಂಡಿಗಳನ್ನು ಬಡಿಸುವುದು ಸೂಕ್ತ. [ಮದ್ಯವನ್ನು ಒದಗಿಸುವ ವ್ಯವಸ್ಥೆಯಿದ್ದರೆ ಮಾತ್ರ] ಇದು ಮದ್ಯ ಪಾನಿಗಳಿಂದ ಅನ್ಯರಿಗೆ ತೊಂದರೆಯಾಗುವುದನ್ನು ತಪ್ಪಿಸಬಹುದು. ಮಾತ್ರವಲ್ಲದೆ ಎಳೆ ಮಕ್ಕಳ ಮೇಲೆ ಮದ್ಯಪಾನಿಗಳ ಪ್ರಭಾವವುಂಟಾಗುವುದನ್ನು ತಪ್ಪಿಸಬಹುದು.

ತಮಗೆ ಕುಡಿಯಲು ಒದಗಿಸಲಾದ ಲೋಟಗಳಲ್ಲಿರುವ ನೀರನ್ನು ಪ್ರತಿಯೊಬ್ಬರೂ ಬಾಯಿಗೆ ತಗುಲಿಸದೆ ಸ್ವಲ್ಪ ಎತ್ತರ ಎತ್ತಿ ಕುಡಿಯಬೇಕು. ಇದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು ಮತ್ತು ಪದೇ ಪದೇ ಲೋಟಗಳನ್ನು ಸ್ವಚ್ಛಮಾಡುವ ತೊಂದರೆ ತಪ್ಪುತ್ತದೆ. ಸ್ವಚ್ಛ ಮಾಡಿದರೂ ಸಂಪೂರ್ಣವಾಗಿ ಉಜ್ಜಿ ತೊಳೆಯುವ ಅವಶ್ಯಕತೆಯಿಲ್ಲ. ದಕ್ಷಿಣ ಕನ್ನಡದ ಕೆಲವು ಭಾಗಗಳಲ್ಲಿ ಜನರು ಈ ಮೇಲಿನ ಕ್ರಮವನ್ನು ಪಾಲಿಸುವುದನ್ನು ನಾವು ಗಮನಿಸಬಹುದು.

ಆದಷ್ಟು ಶುಚಿಯಾಗಿರುವವರನ್ನು ಊಟ–ತಿಂಡಿ ಬಡಿಸಲು ನೇಮಿಸಿದರೆ ಭೋಜನ ವ್ಯವಸ್ಥೆಯ ಸೌಂದರ್ಯ ಹೆಚ್ಚುವುದು. ಇದರಿಂದ ಬಡಿಸುವವರನ್ನು ನೋಡಿಯೇ ಅಸಹ್ಯವುಂಟಾಗುವ ಸಂದರ್ಭವನ್ನು ತಪ್ಪಿಸಿದಂತಾಗುತ್ತದೆ. ಬರೀ ಕೈಗಳಿಂದ ಆಹಾರವನ್ನು ಬಡಿಸುವ ಕ್ರಮ ಸೂಕ್ತವಾದುದಲ್ಲ.

ಸಮಾರಂಭದ ವ್ಯವಸ್ಥಾಪಕರು ಆಗಮಿಸುವವರ ಅಂದಾಜು ಪಟ್ಟಿಯನ್ನು ಮೊದಲೇ ತಯಾರಿಸಿಟ್ಟುಕೊಂಡು ಅದಕ್ಕೆ ತಕ್ಕ ಪ್ರಮಾಣದಲ್ಲಿ ಆಹಾರವನ್ನು ತಯಾರಿಸಬೇಕು. ಇದರಿಂದ ಆಹಾರದ ಕೊರತೆಯಾಗುವುದನ್ನು ಅಥವಾ ಉಳಿಕೆಯಾಗುವುದನ್ನು ತಪ್ಪಿಸಬಹುದು.

ಆಹ್ವಾನಿತರು ತಮಗೆ ಬೇಕಾಗುವಷ್ಟು ಆಹಾರವನ್ನು ಮಾತ್ರ ಹಾಕಿಸಿಕೊಳ್ಳಬೇಕು. ಹೆಚ್ಚಿಗೆ ಹಾಕಿಸಿಕೊಂಡು ಅನಂತರ ಎಲೆಯಲ್ಲಿ ಉಳಿಸಿದರೆ ಅವರಿಂದ ಆಹಾರ ಅಪವ್ಯಯ ಮಾಡಿದಂತಾಗುವುದು. ಮಾತ್ರವಲ್ಲದೆ ಇದು ಆಹಾರದ ಕೊರತೆಗೂ ಕಾರಣವಾಗಬಹುದು. ಬಡಿಸುವವರು ಊಟ ಮಾಡುವವರಿಗೆ ಸಾಕಾಗುವಂತೆ ಆದರೆ ಹೆಚ್ಚಾಗದಂತೆ ನಿರ್ದಿಷ್ಟ ಪ್ರಮಾಣದಲ್ಲಿ ಆಹಾರವನ್ನು ಬಡಿಸಬೇಕು. ವ್ಯವಸ್ಥಾಪಕರು ನಾಯಿ, ಬೆಕ್ಕುಗಳಂತಹ ಪ್ರಾಣಿಗಳನ್ನು ಭೋಜನ ಸ್ಥಳಕ್ಕೆ ಬಾರದಂತೆ ಸೂಕ್ತ ಕ್ರಮ ಕೈಗೊಳ್ಳಬೇಕು. ಹಾಗೆಯೇ ಬಹಳ ಧೂಳು ಎದ್ದೇಳುವ ಸ್ಥಳವನ್ನು ಭೋಜನ ಸ್ಥಳಕ್ಕಾಗಿ ಆರಿಸಬಾರದು. ಧೂಮಪಾನಿಗಳು ಭೋಜನ ಸ್ಥಳದಲ್ಲಿ ಧೂಮಪಾನ ಮಾಡಬಾರದು.

ಊಟವಾದ ನಂತರ ಕೈ ತೊಳೆಯಲು ಇಟ್ಟಿರುವ ನೀರಿರುವ ಹಂಡೆ, ಪಾತ್ರೆಗಳನ್ನು ಭೋಜನ ಸ್ಥಳದಿಂದ ಸಾಕಷ್ಟು ದೂರದಲ್ಲಿ ಇಡಬೇಕು. ಇದರಿಂದ ಕೈಬಾಯಿ ತೊಳೆಯುವ ದೃಶ್ಯ ಅಥವಾ ಶಬ್ದಗಳಿಂದ, ಭೋಜನ ಮಾಡುತ್ತಿರುವವರಿಗೆ ಅಸಹ್ಯವುಂಟಾಗುವ ಸಂದರ್ಭವನ್ನು ತಪ್ಪಿಸಿದಂತಾಗುತ್ತದೆ. ನೀರಿನ

(12ನೇ ಪುಟ ನೋಡಿ)

## ವಿದ್ಯೆಯ ಗುರಿ

ಉತ್ತಮ ವ್ಯಕ್ತಿಗಳನ್ನು ತಯಾರಿ ಮಾಡುವುದೇ ವಿದ್ಯೆಯ ಅತಿ ಮುಖ್ಯ ಗುರಿ. ಪರೀಕ್ಷೆ ಒಂದು ಮಾತ್ರ ವಿದ್ಯೆಯ ಗುರಿ ಎಂದು ಗಮನದಲ್ಲಿಟ್ಟುಕೊಂಡು ಓದುವುದು ಮುಖ್ಯವಲ್ಲ. ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳುವುದು ಮುಖ್ಯ. "ಪುಸ್ತಕದಲ್ಲಿರುವುದನ್ನು ಓದಿ ಮಸ್ತಕದಲ್ಲಿಟ್ಟುಕೊಂಡರೆ ಆ ಮಸ್ತಕವೇ ಒಂದು ಗ್ರಂಥಾಲಯವಾಗಿಬಿಡುತ್ತದೆ". ವಿದ್ಯೆಯ ಪ್ರಭಾವ ನಮ್ಮ ಮೇಲೆ ಬೀರಿದಾಗ ನಾವು ನಿಸ್ವಾರ್ಥಿಗಳಾಗುವುದರಲ್ಲಿ ಸಂಶಯವಿಲ್ಲ. ತಾನು ತನ್ನ ಮನೆತನಕ್ಕೆ, ಊರಿಗೆ, ದೇಶಕ್ಕೆ ಹೀಗೆ ತನ್ನ ವಿದ್ಯೆಯ ಪ್ರಭಾವವನ್ನು ಬೀರಬೇಕು ಎಂಬುದನ್ನು ತಿಳಿದಿರಬೇಕು. ಹೆಚ್ಚು ವಿಷಯಗಳನ್ನು ತಿಳಿದುಕೊಂಡು ನಮಗೆ ನಾವೇ ವಿಶ್ವವಿದ್ಯಾನಿಲಯವಾಗಬೇಕು.

ಸಂಸಾರವೆಂಬುದು ಒಂದು ಸಾಗರ ಇದ್ದ ಹಾಗೆ. ಈ ಸಾಗರವನ್ನು ಈಜಿ ದಡ ಸೇರುವುದು ತುಂಬಾ ಕಷ್ಟ. ಆಗ ಮನುಷ್ಯನ ಶಾಂತಿ ಕದಡಿ ಅಶಾಂತಿ ತಲೆದೋರುವುದು ಸಹಜ. ಇಂತಹ ಸಂಸಾರವೆಂಬ ಸಾಗರದಲ್ಲಿ ಪುಸ್ತಕಗಳನ್ನು ಓದಬೇಕು. ಇದರಿಂದ ಹೆಚ್ಚು ವಿಷಯಗಳನ್ನು ತಿಳಿದುಕೊಂಡು ಮನಃಶಾಂತಿಯನ್ನು ಪಡೆದುಕೊಂಡು ಸಂಸಾರ ಸಾಗರದಲ್ಲಿ ಈಜಿ ದಡ ಸೇರುವಲ್ಲಿ ವಿದ್ಯೆ ಸಹಕರಿಸುತ್ತದೆ.

ಬರೇ ಓದುವುದು, ಬರೆಯುವುದು ವಿದ್ಯಾಭ್ಯಾಸ ಎಂದು ಭಾವಿಸುವುದು ಅರ್ಥಪೂರ್ಣವಲ್ಲ. ಅದನ್ನು ಹಾಗೆಂದು ತಿಳಿದುಕೊಂಡವನು ನಿಜವಾಗಿ ವಿದ್ಯಾವಂತನಲ್ಲ. "ಸಮಾಜದಲ್ಲಿ ಬೆರೆತು, ಸಮಾಜದ ಆಗು–ಹೋಗುಗಳನ್ನು ತಿಳಿದುಕೊಳ್ಳುವಲ್ಲಿ ವಿದ್ಯೆ ಸಹಕರಿಸುತ್ತದೆ". ನಮ್ಮ ಕಾಲು ಮೇಲೆ ನಾವೇ ನಿಂತು ನಮ್ಮ ಜೀವನವನ್ನು ರೂಪಿಸಿಕೊಳ್ಳುವಲ್ಲಿ ವಿದ್ಯೆ ನೆರವಾಗುತ್ತದೆ.

ಅಷ್ಟೇ ಅಲ್ಲದೆ ಸಾಮಾಜಿಕ ಸುಧಾರಣೆಯಾಗಿ, ಸುಭದ್ರ ರಾಷ್ಟ್ರ ನಿರ್ಮಾಣದಲ್ಲಿ ವಿದ್ಯೆ ನಿರಂತರವಾಗಿ ಉಪಯೋಗಗೊಂಡು ಉತ್ತಮ ನಾಗರಿಕತೆಯನ್ನು ರೂಪಿಸುತ್ತದೆ. ಇದನ್ನರಿತು ಪ್ರತಿಯೊಬ್ಬ ಗೌಡ ಬಾಂಧವರು ವಿದ್ಯಾರಂಗಕ್ಕಿಳಿದು ದೇಶದಲ್ಲಿಯೇ ಉತ್ತಮ ಅಕ್ಷರಸ್ಥ ಜನಾಂಗವೆನ್ನಿಸಿಕೊಂಡರೆ ಹೆಮ್ಮೆಯ ವಿಚಾರವಲ್ಲವೆ ?

● ಯು.ಆರ್. ರುಕ್ಮಿಣಿ, ಮಡಿಕೇರಿ

## ಮಹಿಳೆ ಪ್ರಗತಿ ಹೊಂದಬೇಕು

ಒಂದು ಸಮಾಜ ಮತ್ತು ಒಂದು ದೇಶದಲ್ಲಿ ಸ್ತ್ರೀಯರು ಪ್ರಗತಿ ಹೊಂದಬೇಕಾದರೆ ತನ್ನ ಕೀಳರಿಮೆಯಿಂದ ಹೊರಬಂದರೆ ಮಾತ್ರ ಸಾಧ್ಯ. ಪುರುಷರಿಗಿಂತಲೂ ಒಂದು ಪಟ್ಟು ಹೆಚ್ಚಿನ ಜ್ಞಾಪಕ ಶಕ್ತಿಯನ್ನು ಹೊಂದಿರತಕ್ಕಂತಹ ಸ್ತ್ರೀ ಜನಾಂಗ ಈ ತನಕ ಸಂಕುಚಿತ ಸ್ವಭಾವದಿಂದ ಹೊರಬಂದಿಲ್ಲವಾದ್ದರಿಂದ ಈ ಕಲುಷಿತ ಸಮಾಜದಲ್ಲಿ ಪ್ರಗತಿ ಹೊಂದಲು ಸಾಧ್ಯವಾಗುತ್ತಿಲ್ಲ. ನಾವೀಗ 21ನೇ ಶತಮಾನಕ್ಕೆ ಕಾಲಿಡುತ್ತಿರುವ ಈ ಕ್ಲಿಷ್ಟಕರ ಸನ್ನಿವೇಶದಲ್ಲಿ ಇಂತಹ ಭಾವನೆಯಿಂದ ಹೊರಬಂದು ಸಂಘಟಿತರಾಗಬೇಕು.

ಪ್ರತಿ ತಿಂಗಳಿಗೊಂದಾವರ್ತಿ ಮಹಿಳೆಯರು ಒಂದೆಡೆ ಸೇರಿ ಚರ್ಚಿಸಿ, ಚಿಂತಿನೆ–ಮಂಥನೆ ಮಾಡಿ ಉತ್ತಮ ಕಾರ್ಯಕ್ರಮದೊಂದಿಗೆ ಕೆಲಸ ನಿರ್ವಹಿಸಬೇಕು. ಸ್ತ್ರೀಯರು, ಬಾಲಕಿಯರು ಇಂತಹ ಕಾರ್ಯಕ್ಕೆ ಸಂಘಟಿತರಾಗಿ, ಮುಂದೆಬರುವುದು ಒಳಿತು. ತನ್ನ ವಠಾರದ ಚೌಕಟ್ಟಿನಿಂದ ಹೊರಬಂದಾಗ ಹೊರಗಿನ ಜ್ಞಾನವನ್ನು ಪಡೆಯಲು ಸಾಧ್ಯ. ಮಹಿಳೆಯರು ಧೈರ್ಯ, ಸ್ಥೈರ್ಯ, ಆತ್ಮ ವಿಶ್ವಾಸವನ್ನು ಬೆಳೆಸಿಕೊಳ್ಳಬೇಕು. ಒಂದು ಸಮಾಜದ ಏಳಿಗೆಯೇ ಒಂದು ದೇಶದ ಪ್ರಗತಿಯೆಂದು ಭಾವಿಸಿದಾಗ ಸ್ತ್ರೀಸಮಾಜದಲ್ಲಿ ಆಗತ್ಯ ಸುಧಾರಣೆಯಾಗುವುದು. ತಾಯಿ ಸುಸಂಸ್ಕೃತಿಯಾದಾಗ ತನ್ನ ಮಗುವು ಸಹ ಸುಸಂಸ್ಕೃತಿಯಾಗುವಳು. ಅಂತವರಿಂದ ಮಾತ್ರ ಉತ್ತಮ ಸಮಾಜ ನಿರ್ಮಾಣವಾಗಲು ಸಾಧ್ಯವಾಗುವುದು.

○ ಪಟ್ಟಡ ಶೀಲಾಮಣಿ

(11ನೇ ಪುಟದಿಂದ)

ಹಂಡೆ, ಪಾತ್ರೆಗಳಲ್ಲಿ ಪ್ಲಾಸ್ಟಿಕ್ ಚೊಂಬುಗಳನ್ನು ಇಡುವುದು ಸೂಕ್ತ. ಲೋಹದ ಚೊಂಬುಗಳಾದರೆ ಹಂಡೆಯೊಳಗೆ ಮುಳುಗಿಬಿಡುತ್ತದೆ.

ಮೇಲೆ ಹೇಳಿರುವ ಸಲಹೆ, ಸೂಚನೆಗಳಲ್ಲಿ ಯಾವ ವಿಶೇಷತೆಗಳೂ ಇಲ್ಲ. ಆದರೆ ಈ ಸಲಹೆ, ಸೂಚನೆಗಳನ್ನು ಸರಿಯಾಗಿ ಪಾಲಿಸಿದರೆ ಭೋಜನ ವ್ಯವಸ್ಥೆಯ ಅಂದ ಚೆಂದ ಹೆಚ್ಚುವುದಂತೂ ನಿಜ. ಇಷ್ಟಾದರೂ ಕೂಡಾ ಈ ಸಲಹೆ, ಸೂಚನೆಗಳನ್ನು ಸರಿಯಾಗಿ ಪಾಲಿಸುತ್ತಿಲ್ಲ ಎನ್ನುವುದು ವಿಷಾದದ ವಿಷಯ.

● ಬೈತಡ್ಕ ಕೆ. ಶ್ರೀಧರ, ಪುತ್ತೂರು.

ನಮ್ಮ ಹಾಸ್ಟೆಲ್‌ನ ವಾರ್ಡನ್ ತುಂಬಾ ಶಿಸ್ತು
ಅವರನ್ನು ಕಂಡರೆ ಆಗುತ್ತದೆ ನಮಗೆಲ್ಲ ಸುಸ್ತು
ಅವರು ನಮಗೆ ದಂಡಿಸಿ ಬೈಯ್ಯುತ್ತಾರೆ
ನಾವು ಅವರಿಗೆ ವಂದಿಸಿ ಅಣುಕಿಸುತ್ತೇವೆ
ಇದೇ ವಾರ್ಡನ್‌ಗೆ ನಾವು ಕೊಡುವ ಶಿಸ್ತಿನ ಗಿಫ್ಟ್.

● ಉಳುವಾರನ ಧನುಜ, ಹುಣಸೂರು

## ಗೌಡರ ವಿವಾಹ ಪದ್ಧತಿಯ ಶೋಬಾನೆಗಳು

### ಎಣ್ಣೆ ಅರಿಸಿನ ಮಾಡುವಾಗ ಹೇಳುವ ಹಾಡುಗಳು ;

ಶರಣು ಲೋಕನಾಯಕ ವೆಂಕಟೇಶನಿಗೆ, ನೀ ಕರುಣಿಸಿ ಸಲಹೋ ದೇವ ಜಯ ಜಯ ರಾಮ ಜಯರಾಮ! ಪಟ್ಟೆ ಪೀತಾಂಬರ ನೆರೆದುಟ್ಟು ವೀಣೆ ಕಸ್ತೂರಿ ಫಣಿಯೊಳು ತೊಟ್ಟು ಜಾಣೆಯರೆಲ್ಲಾ ನೆರೆದರು. ಸುಂದರನಾದ ಬಾಣನ ಪಟ್ಟೆದಾನೆಗಳಂತೆ ॥ ಜಯ ಜಯರಾಮ ಜಯರಾಮ! ಮದುವೆಯ ನಾಲ್ಕು ದಿನಗಲ್ಲಿ ಮದುಮಣಿಗ ಸೀತಾರಾಮರಿಗೆ ಮುದದಿಂದ ಎಣ್ಣೆ ಅರಸಿಣವ ಮಾಳ್ಪ ಸಂಭ್ರಮವ ಕೇಳಿ । ಜಯ ಜಯ ರಾಮ ಜಯ ರಾಮ ಬಹ್ಮನ ಪತ್ನಿ ಸರಸ್ವತೀದೇವಿ ವಾಯು ರುಕ್ಮಿಣಿದೇವಿ ಹರನಲ್ಲದೆ ಪಾರ್ವತಿದೇವಿ ಸಹಿತ ಅರಿಸಿಣ ಎಣ್ಣೆಯ ಮಾಡಬಂದರಾಗ! ಜಯ ಜಯ ಜಯರಾಮ ಜಯರಾಮ!

ಹರುಷದಿಂದಲಿ ಕೌಸಲ್ಯ ಕೈಕೇಯಿ ಸುಮಿತ್ರೆಯರು ಶ್ರೀ ರಾಮಚಂದ್ರರಿಗೆ ಎಣ್ಣೀ ಅರಿಸಿಣವ ಮಾಡಿದರಾಗನಿತ್ರೆ. ಸುಮಿತ್ರೆದೇವಿ ಕೇರಿಕೇರಿಯೊಳಿದ್ದ ನಿತ್ರೆಯರನ್ನೆಲ್ಲ ಕರೆಯಿಸಿದಳು । ಜಯ ಜಯ ರಾಮ ಜಯರಾಮ । ಕುಸುಮ ಬಾಣಕ್ಕೆ ಮೂರ್ಜಾಲದಂತೆ ದಶರಥನರಮನೆಯಲ್ಲಿ । ಬಣ್ಣ ಬಣ್ಣದ ಪಟ್ಟೆಯನ್ನುಟ್ಟು ಪುತ್ರಂಗಿಗಳ ತೊಟ್ಟು ಮಿನುಗುವ ಮುಸುಕುವನ್ನುಟ್ಟುಪರಿಮಳ ತುಂಬಿ ನಿಂದಾರ ಅರಮನೆಯಲ್ಲಿ । ಜಯ ಜಯ ರಾಮ ಜಯರಾಮ । ಅಲ್ಲಿಗೆ ಅಲ್ಲಿಗೆ ಹಿಡಿಹೊನ್ನು ಚೆಲ್ಲುತ ದಶರಥ ಸುತನ ನಡತಂದು ಹೊಂಬಣ್ಣದ ಅರಿಸಿಣವ ಕಲಿಸಿ ತುಂಬಿದರು! ಹರಿವಾಣದಲ್ಲಿ ಅಂಬುಜ ಪೀತ ಶ್ರೀರಾಮರಿಗೆ । ಜಯ ಜಯ ಜಯರಾಮ । ತುಡುಕುವ ತಮ್ಮಟೆಗಳು ಭೇರಿ ನಿಶಾರೆಗಳು ಒಡನೇ ಕೂಗುವ ಕೊಂಬುಗಳು ಸಿಡಿಲಂತೆ ಗರ್ಜಿಸುವ ಪಂಚಮ ವಾದ್ಯಗಳು ತುಂಬಿದವು । ಜನಕನ ಅರಮನೆಯಲ್ಲಿ ದಿಕ್ಕು ದಿಕ್ಕಿನ ರಾಯರುಗಳಿಗೆ ರತ್ನಗಂಬಳಿಯನ್ನು ಹಾಸಿ ಸತ್ಕಸಿದರು! ಜಯ ಜಯ ರಾಮ ಜಯರಾಮ । ಬ್ರಹ್ಮ, ಹರಿಹರ ಇಂದ್ರರು ವಿಸ್ತಾರವ ಮಂಟಪದಲ್ಲಿ ಸೇರಿ ಹರುಷದಲ್ಲಿ ಹರಿಸಿದರು! ಮಣಿ ಮಂಟಪದಲ್ಲಿ ಹಸೆಗಕ್ಕಿ ಕನಕದ ಮಣೆಯನ್ನು ತಂದಿರಿಸಿ ಇನಕೂಲ ರಾಮನ ಹಸೆಗೇಳೆನ್ನು ವಿನಯದಿಂದ ಕೌಸಲ್ಯ ಕರೆತಂದಾಳಾಗ! ಜಯ ಜಯ ರಾಮ ಜಯರಾಮ! ಬೇಗದಿ ಉಡುಗೆಯ ಹಾಸಿ ಆಗಲೇ ಉಪಚಾರ ಮಾಡಿ ಭಾಗ್ಯದಾರತಿಯ ಬೆಳಗಿದರು । ಪಾರ್ವತಿ ಸಹಿತ ನಾರಾಯಣ ನರಸಿ ಸೀತಾರಾಮರಿಗೆ! ಜಯ ಜಯ ರಾಮ ಜಯರಾಮ!

### ಮುಖ ಕ್ಷೌರ ಮಾಡುವಾಗ ಹೇಳುವ ಹಾಡು ;

ಅಂಗಳ ಸಾರಿರಿಸಿ ರಂಗೋಲೆ ಬರೆದಿರಿಸಿ ರಾಯವಣ್ಣಯ್ಯನ ಚವರಕ್ಕೆ । ಮಂಟಪ ಸಾರಿರಿಸಿ ಚಿತ್ತಿರ ಬರೆದಿರಿಸಿ ರಾಯವಣ್ಣಯ್ಯನ ಚವರಕ್ಕೆ ॥ ರಾಯ.ವಣ್ಣಯ್ಯನ ಚವರದ ಕೆಲಸಕ್ಕೆ ನಾದಿಗಿಲ್ಲದೆ ಮದುವಿಲ್ಲ । ನಾದಿಗನ ಹೇಳಲಿಕೆ ಯಾರ್‍ಯಾರು ಹೋಗಬೇಕು ಏಳಾಳಿಗಿಂತ ಹಿರಿಯಣ್ಣ ॥ ಸಮರಾತ್ರಿಲೆದ್ದು ಕೆನೆ ಮೊಸರೂಟವ ಮಾಡಿ ನಾದಿಗರ ಮನೆಗೆ ಹೊರಟಾನು ಅಣ್ಣಯ್ಯ ನಾದಿಗ ನಾದಿಗನೆಂದು ಕರೆದಾನು ॥ ಒಂದು ಕರೆವಾಗ ಆಲಿಸಾನು ನಾದಿಗ! ಎರಡೊಮ್ಮೆ ಕರೆವಾಗ ಓ ಎಂದು ಓ ಗೊಂಡು ಕೈಯೆತ್ತಿ ಸರಣೆ ಮಾಡಿದಾನು!! ಏನಾಗಿ ಬಂದಿರಿ ಸ್ವಾಮಿ । ಎಂತದಾಗಿ ಬಂದಿರಿ ಬಂದ ಕಾರ್ಯಗಳ ತಿಳಿದೇಳಿ । ನಾಳೆ ನಮ್ಮರಮನೇಲಿ ಕಂದಯ್ಯಗೆ ಸೋಬಾನೆ ನಾದಿಗನಿಲ್ಲದೆ ಮಧುವಿಲ್ಲ । ಬರುತ್ತೇನೆ ನಮ್ಮ ಸ್ವಾಮಿ ಬರುತ್ತೇನೆ ನಮ್ಮ ಸ್ವಾಮಿ । ಕೈಯೆತ್ತಿ ಸರಣೆ ಮಾಡಿದಾನು । ಸಮರಾತ್ರಿಲೆದ್ದು ಕೆನೆ ಮೊಸರೂಟವ ಮಾಡಿ!ಚಿನ್ನ ದುಡುಪುಗಳತೆಗೆದಾನು!ಚಿನ್ನ ದುಡುಪುಗಳತೆಗೆದಾನು ನಾದಿಗ ಮದುವೆಯ ಮನೆಗೆ ನಡೆದಾನು ॥ ಅಗ್ಲೆ ಬರಹೇಳಿ ಬಹಳತಡವಾಯ್ತು ಪ್ರೀತಿಲ್ಲೋ ನಿನಗೆ ಮನದಲ್ಲಿ! ಆಗಲೆ ಬಂದೇನು ಬಾಗಲಲಿ ನಿಂದೇನು ಬಾಗಿಲ ದವರನ್ನ ತಡೆದಾರು । ಬಾಗಿಲದವರೆನ್ನ ತಡೆದು ಮಾತನೆ ಆಡಿ ಅಲ್ಲೊಂದರಗಳಿಗೆ ತಡವಾದೊ॥ ಅಲ್ಲೊಂದರಗಳಿಗೆ ತಡವಾದೊ ದೊರೆಗಳಿರ ಪ್ರೀತ್ಯುಂಟು ನನಗೆ ಮನದಲ್ಲಿ! ಪ್ರೀತ್ಯುಂಟು ನನಗೆ ಮನದಲ್ಲಿ ದೊರೆಗಳಿರ ಚವರದ ಕೆಲಸ ಬೇಗನಾಗ್ಲಿ! ಒಂದು ಚಿನ್ನಕ್ಕೆ ಒಂಬತ್ತು ಸುತ್ತಿನ ಕೋಟೆ ಸುತ್ತಿನೊಳಗೆ ಮುಖತೋರೆ! ಸುತ್ತಿನೊಳಗೆ ಮುಖತೋರೆ! ಅಣ್ಣಯ್ಯ ಚವರದ ಕೆಲಸ ಜತನಾಗ್ಲಿ । ಹನ್ನೆರಡು ಚಿನ್ನಕ್ಕೆ ಹನ್ನೆರಡು ಸುತ್ತಿನ ಕೋಟೆ ಸುತ್ತಿನೊಳಗೆ ಮುಖತೋರೆ ಅಣ್ಣಯ್ಯ ಚವರದ ಕೆಲಸ ಜತನಾಗ್ಲಿ!! ಬಲಗೆನ್ನೆ ಒತ್ತುವನು ಬಲಗೆನ್ನೆಗೆ ಮಿಂಚಿಡುವೆನು । ಬಲಗೆನ್ನೆ ಒಳಗೆ ಕಸಕಪ್ಪು! ಬಲಗೆನ್ನೆ ಒಳಗೆಕಸಕಪ್ಪು ವುಳಿದಾರೆ ಅಕ್ಕಿಯ ವಾಜ ನಿನಗಿಲ್ಲ!! ಕೈ ಉಗುರೊತ್ತುವನು ಕೈ ಉಗುರಿಗೆ ಮಿಂಚಿಡುವನು ಕೈ ಉಗುರಿನೊಳಗೆ ಕಸಕಪ್ಪು! ಕೈ ಉಗುರಿನೊಳಗೆ ಕಸಕಪ್ಪುವುಳಿದಾರೆ ಹಣದ ವಾಜ ನಿನಗಿಲ್ಲ!! ಕಾಲುಗುರಿನೊಳಗೆ ಕಸಕಪ್ಪುವುಳಿದಾರೆ ವಸ್ತ್ರದ ವಾಜ ನಿನಗಿಲ್ಲ ॥ ಬಲಗೆನ್ನೆ ಒತ್ತುವೆನು ಬಲಗೆನ್ನೆಗೆ ಮಿಂಚಿಡುವೇನು! ಬಲಗೆನ್ನೆಯೊಳಗೆ ಕಸಕಪ್ಪು ಬಿಡೊನಲ್ಲ! ಬಲಿಗನ್ನೆಯೊಳಗೆ ಕಸಕಪ್ಪು ಬಿಡೋನಲ್ಲ! ಅಕ್ಕಿಯ ವಾಜ ನನಗುಂಟು!! ಕೈ ಉಗುರೊತ್ತುವೆನು ಕೈ ಉಗುರಿಗೆ ಮಿಂಡುವೆನು! ಕೈ ಉಗುರಿನೊಳಗೆ ಕಸಕಪ್ಪು ಬಿಡೋನಲ್ಲ! ಕೈ ಉಗುರಿನೊಳಗೆ ಕಸಕಪ್ಪು ಬೀಡೊನಲ್ಲ ಹಣದ ವಾಜ ನನಗುಂಟು ಕಾಲುಗುರೊತ್ತುವೆನು ಕಾಲುಗುರಿಗೆ ಮಿಂಚಿಡುವೇನು ಕಾಲುಗುರಿನಲ್ಲಿ ಕಸಕಪ್ಪು ಬಿಡೋನಲ್ಲ । ಕಾಲುಗುರಿನಲ್ಲಿ ಕಸಕಪ್ಪು ಬಿಡೊನಲ್ಲ ವಸ್ತ್ರದ ವಾಜ ನನಗುಂಟು ॥

[ಮುಂದುವರಿಯುವುದು]

# ತಾಲ್ಲೂಕು ಪಂಚಾಯಿತಿ ಸದಸ್ಯೆ ತೋಟಂಬೈಲು ಪ್ರೇಮಾ ಆನಂದ

ಸಮಾಜ ಸೇವೆ ಮಾಡುವುದು ಎಲ್ಲರಿಂದ ಆಗುವ ಕೆಲಸವಲ್ಲ. ಅಂತಹ ಕೆಲಸವನ್ನು ತನ್ನ ಸಂಸಾರದ ಸಹಕಾರದೊಂದಿಗೆ ತನ್ನ ಚಿಕ್ಕ ಪ್ರಾಯದಿಂದಲೇ ಮಾಡುತ್ತಾ ಬಂದಿದ್ದಾರೆ ಚೆಯ್ಯಂಡಾಣೆಯ ಶ್ರೀಮತಿ ತೋಟಂಬೈಲು ಪ್ರೇಮಾ ಆನಂದರವರು.

ತೋಟಂಬೈಲು ದೇವಯ್ಯ ಆನಂದನವರ ಪ್ರೀತಿಯ ಪತ್ನಿಯಾಗಿ 1983ರಲ್ಲಿ ವಿವಾಹವಾದ ಪ್ರೇಮಾ ಸಾರ್ವಜನಿಕ ರಂಗಕ್ಕೆ 1987ರಲ್ಲಿ ಧುಮುಕಿದರು.

1987ರಲ್ಲಿ ಮಂಡಲ ಪಂಚಾಯಿತಿ ಸದಸ್ಯೆಯಾಗಿ ಉತ್ತಮ ಅನುಭವ ಪಡೆದು ತದನಂತರ 1995ರ ತಾಲ್ಲೂಕು ಪಂಚಾಯಿತಿ ಸದಸ್ಯೆಯಾಗಿ ಭಾರತೀಯ ಜನತಾ ಪಕ್ಷದಿಂದ ಆಯ್ಕೆಯಾದರು. ಆ ಸಮಯದಲ್ಲಿ ಕೊಡಗಿನಿಂದ ಜನಾಂಗದ ಐದು ಜನ ಮಹಿಳೆಯರು ಜಯಶೀಲರಾಗಿದ್ದುದನ್ನು ನೆನಪಿಸಿಕೊಳ್ಳುತ್ತಾರೆ.

ಪ್ರೇಮ ತನ್ನೂರಿನಲ್ಲಿರುವ ಮಹಿಳಾ ಸಮಾಜದಲ್ಲಿ ಸಾಕಷ್ಟು ಕೆಲಸ ಮಾಡಿ ಪ್ರಸಿದ್ಧಿಯಾಗಿದ್ದಾರೆ. ಚೆಯ್ಯಂಡಾಣೆಯ ಪ್ರಾಥಮಿಕ ಶಾಲೆಯ ಕಾರ್ಯಕಾರಿ ಮಂಡಳಿ ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಮೂರು ವರ್ಷಗಳ ಕಾಲ ಶಾಲೆಯ ಅಭಿವೃದ್ಧಿಗಾಗಿ ಹಗಲಿರುಳು ತನ್ನ ಸೇವೆಯನ್ನು ಸಲ್ಲಿಸಿದ್ದಾರೆ. ಯಡಪಾಲ ಶೈಕ್ಷಣಿಕ ಮಂಡಳಿಯ ಅಧ್ಯಕ್ಷೆಯಾಗಿ ಸಹ ದುಡಿದಿದ್ದಾರೆ.



ಶ್ರೀಮತಿ ತೋಟಂಬೈಲು ಪ್ರೇಮ

ಚೆಯ್ಯಂಡಾಣೆ ಆಸ್ಪತ್ರೆಯಲ್ಲಿ ಉಪಾಧ್ಯಕ್ಷೆಯಾಗಿ ಕಾರ್ಯನಿರ್ವಹಣೆ ಮಾಡಿದ್ದಾರೆ.

ತನ್ನ ಚಿಕ್ಕ ಪ್ರಾಯದಲ್ಲಿ ಅತೀವವಾದ ಸಾರ್ವಜನಿಕ ಸೇವೆಯನ್ನು ಮಾಡಲು ಮೊದಲು ಪ್ರೋತ್ಸಾಹ ನೀಡಿದ ತನ್ನ ಪ್ರೀತಿಯ ಪತಿರಾಯ ಆನಂದನವರನ್ನು ಮತ್ತು ಪ್ರೇರಣೆನೀಡಿದ ಅತ್ತೆ ಬೊಳ್ಳಮ್ಮದೇವಯ್ಯನವರನ್ನು ನೆನೆಯುತ್ತಾರೆ. ತನ್ನ ಪತಿ ಮತ್ತು ಅತ್ತೆ ಸಹಕರಿಸದಿದ್ದರೆ ಈ ರಂಗಕ್ಕೆ ಬರಲು ಸಾಧ್ಯವೆ ಇರುತ್ತಿರಲಿಲ್ಲವೆನ್ನುತ್ತಾರೆ ಶ್ರೀಮತಿ ಪ್ರೇಮ.

ತ್ರಿಶೂಲ್ ಮತ್ತು ಮೌನವೆಂಬ ಎರಡು ಮಕ್ಕಳ ತಾಯಿಯಾದ ಪ್ರೇಮ ಕಾರುಗುಂದ ಗ್ರಾಮದ, ಕೇಟೋಳಿ ಮನೆತನದ ಉತ್ತಯ್ಯ ದಂಪತಿಗಳ ಸುಪುತ್ರಿಯಾಗಿದ್ದಾರೆ. ಸಮಾಜ ಸೇವೆಯೇ ಜನಾರ್ಧನ ಸೇವೆಯೆಂದು ತಿಳಿದ ಈ ಉತ್ಸಾಹಿ ತರುಣಿ ಹುಟ್ಟಿದ ಮನೆಗೂ ಹಾಗೂ ಹತ್ತಿದ ಮನೆ ಸ್ಥಾನಕ್ಕೂ ಕೀರ್ತಿಯನ್ನು ತಂದಿರುವ ಇವರ ಸೇವೆಯನ್ನು ಜನಾಂಗದ ಸರ್ವರಿಗೂ ಪರಿಚಯಿಸಿ, ಇನ್ನಷ್ಟು ಸಮಾಜ ಸೇವೆ ಮಾಡಲು ಮುಂದೆ ಬರುವ ಜನಾಂಗ ತರುಣಿಯರಿಗೆ ಮಾದರಿಯಾಗಿದ್ದಾರೆಂದು ತಿಳಿಸಿ 'ಸಂಗಾತಿ' ಮನಃಪೂರ್ವಕ ಹಾರೈಸುತ್ತದೆ.

● ವರದಿ–ಮಣ್ಣಂಡ್ರ ಕೆ. ತಮ್ಮಯ್ಯ

## ಇನ್ನು ಮುಂದೆ ಕೊಡಗು ಸಂಗಾತಿ ಪತ್ರಿಕೆ ಇಲ್ಲ

**ಕೆಲವು ತಿಂಗಳುಗಳಿಂದ ಜ್ಞಾಪನಾ ಪತ್ರವನ್ನು ಕಳುಹಿಸಿದರೂ ಸಹ "ಕೊಡಗು ಸಂಗಾತಿ"ಯ ಚಂದದಾರರಾಗದೇ ಇರುವವರಿಗೆ ತಾ|| 1-8-1998 ರಿಂದ ಅಂದರೆ, ಆಗಸ್ಟ್ ತಿಂಗಳಿಂದ ಪತ್ರಿಕೆಯನ್ನು ಕಳುಹಿಸಲಾಗುವುದಿಲ್ಲ. ನವೀಕರಣ ಬಯಸುವವರು ಮೇಲೆ ಸೂಚಿಸಿರುವ ದಿನಾಂಕದೊಳಗೆ ಚಂದದಾರರಾಗದಿದ್ದರೆ 'ಕೊಡಗು ಸಂಗಾತಿ ಪತ್ರಿಕೆ ನಿಮ್ಮ ಮನೆಗೆ ಬರುವುದಿಲ್ಲ. ಕ್ಷಮಿಸಿ, ಈವರೆಗೆ ಚಂದ ಹಣ ಕೊಡದೇ ಓದಿದವರು ಸಾಧ್ಯವಾದರೆ ಕಳುಹಿಸಿ ಕೊಡಿ.**

**ಸಂಪಾದಕಿ ಮತ್ತು ಪತ್ರಿಕಾ ಬಳಗ**

# ನಿಮ್ಮ ಪತ್ರಗಳು

### ಗೌಡ ಸಮಾಜಗಳ ಲೆಕ್ಕ ಪತ್ರ ಎಲ್ಲಿ ? ಎಂಬ ಶಿರ್ಷಿಕೆಗೆ ಕೊಡಗು ಗೌಡ ವಿದ್ಯಾ ಸಂಘದ ನಿರ್ದೇಶಕರಾದ ಸೂರ್ತಲೆ ಸೋಮಣ್ಣನವರ ಸಮಜಾಯಿಷಿಕೆ

ಮಾನ್ಯ ಇಂದ್ರಕುಮಾರರವರೇ ಪತ್ರಿಕೆ ಎಂಬುದು ಸರಕಾರ ಮತ್ತು ಸಾರ್ವಜನಿಕರು, ಸಂಘ, ಸಂಸ್ಥೆ ಮತ್ತು ಸದಸ್ಯರು ಇವರುಗಳ ಮಧ್ಯೆ ಅಭಿಪ್ರಾಯ ಹಂಚಿಕೆಯ ಮಾಧ್ಯಮಗಳೇ ಹೊರತು ಅಲ್ಪ ಜ್ಞಾನದಿಂದ ಬರಹವೊಂದನ್ನು ಬರೆದು ಸಾರ್ವಜನಿಕರಲ್ಲಿ ಗೊಂದಲ ಪಡಿಸುವ ಮಾಧ್ಯಮಗಳಲ್ಲವೆಂದು ತಿಳಿಯುವುದು ಸೂಕ್ತ. ಗೌಡ ವಿದ್ಯಾಸಂಘ ಮತ್ತು ಇನ್ನಿತರ ಸಂಸ್ಥೆಗಳು ಎಂದರೇನರ್ಥ? ಜನಾಂಗದ ಇನ್ನಿತರ ಸಂಘ ಸಂಸ್ಥೆಗಳಾವುವು ?

ನಾನು ಕೊಡಗುಗೌಡ ವಿದ್ಯಾ ಸಂಘದ ನಿರ್ದೇಶಕನಾಗಿ 4 ಮಹಾ ಸಭೆಗಳಲ್ಲಿ ನೇಮಕಗೊಂಡು ಕಾರ್ಯ ನಿರ್ವಹಿಸುತ್ತಾ ಬಂದಿದ್ದೇನೆ. ಗೌಡ ವಿದ್ಯಾಸಂಘದ ನಿರ್ದೇಶಕನಾಗಿ ಇಲ್ಲಿ ಉಲ್ಲೇಖಿಸಲಿಚ್ಚಿಸಲ್ಪಡುವುದೇನೆಂದರೆ ಕೊಡಗು ಗೌಡ ವಿದ್ಯಾ ಸಂಘ ಗೌಡ ಸಮಾಜಗಳು ಮತ್ತು ಸಂಸ್ಥೆಗಳ ಮುಕುಟ ಮಣಿ. ಈ ಸಂಘದ ಮಹಾಸಭೆ ಮತ್ತು ಹೆಚ್ಚಿನಂಶ ಪ್ರತೀ ಮೂರು ವರ್ಷಗಳಿಗೊಂದು ಬಾರಿ ನಡೆದೇ ನಡೆಯುತ್ತಿದೆ. ಪ್ರತಿ ವರ್ಷವೂ ಒಬ್ಬ ಲೆಕ್ಕ ಪರಿಶೋಧಕರಿಂದ ಸಂಪೂರ್ಣ ವಾರ್ಷಿಕ ಲೆಕ್ಕ ಪರಿಶೋಧನೆ ಹಾಗೂ ಮಹಾಸಭೆಯಲ್ಲಿ ಈ ಬಗ್ಗೆ ಲೆಕ್ಕಪರಿಶೋಧನಾ ವರದಿ ಮಂಡನೆ ಇವುಗಳು ಯಾವುದೇ ಕಪಟ ರಹಿತವಾಗಿ ನಡೆಯುತ್ತಾ ಬಂದಿದೆ. ದಿವಂಗತ ಕುದುಪಜೆ ಬಿ ಕೃಷ್ಣಪ್ಪನವರ ಅಧ್ಯಕ್ಷತಾ ಅವಧಿಯಲ್ಲಿ ಹಲವು ವರ್ಷಗಳು ನಿರ್ದೇಶಕನಾಗಿ ಕಾರ್ಯ ನಿರ್ವಹಿಸಿದ್ದೇನೆ. ಇವರು ವಿದ್ಯಾ ಸಂಘವನ್ನು ತನ್ನ ಕುಟುಂಬದ ಮೇಲಿದ್ದ ಮಮತೆಯಷ್ಟೇ ಮಮತೆಯಿಟ್ಟು ಜವಾಬ್ದಾರಿಯಿಟ್ಟು ಸಂಘದ ಆಸ್ತಿಯ ಬಗ್ಗೆ ಅತ್ಯಂತ ಕಾಳಜಿಯಿಟ್ಟು ಅದರ ಬೆಳವಣಿಗೆ ಬಗ್ಗೆ ತನ್ನ ಎಲ್ಲಾ ಸ್ವಾರ್ಥತೆಯನ್ನು ಬದಿಗೊತ್ತಿ ದುಡಿದು ಬೆಳೆಸಿ ದಿವಂಗತರಾದರು. ದಿವಗಂತ ದಂಬೆಕೋಡಿ ಸುಬ್ರಾಯನವರು. ದಿವಂಗತ ಪೇರಿಯನ ಪೂವಯ್ಯನವರಂತ ದಾನಿಗಳು ಉದಾರತ್ವ ಮತ್ತು ಮಾರ್ಗದರ್ಶನವಲ್ಲಿ ಬೆಳೆಸಿದ ಈ ಸಂಘದ ಎಲ್ಲಾ ವ್ಯವಹಾರಗಳು ಇಂದಿಗೂ ತೆರೆದ ಪುಸ್ತಕವಾಗಿದೆ. ಪ್ರತಿ ವರ್ಷವೂ ಮಹಾಸಭೆಯನ್ನು ನಡೆಸಬಹುದು, ಲೆಕ್ಕ ಪರಿಶೋಧನಾ ವರದಿಗಳನ್ನು ಸದಸ್ಯರಿಗೆ ಕಳುಹಿಸಬಹು.ದುಆದರೆ ಇದರಿಂದ ಆಗುವ ಲಾಭಕ್ಕಿಂತ ವರ್ಷದ ನಮ್ಮ ಸಂಘದ ಆಯವನ್ನು ಈ ಕಾರಣಗಳಿಗೆ ವಿನಿಯೋಗಿಸಿ ನಷ್ಟವನ್ನುಂಟು ಮಾಡಿದಂತಾಗಿ ಅಭಿವೃದ್ಧಿಗೆ ಹಣವಿಲ್ಲದಂತಾಗಬಹುದು. ಈ ಕಾರಣದಿಂದ 3 ವರ್ಷಕ್ಕೊಮ್ಮೆ ಮಹಾ ಸಭೆ ಹಾಗೂ ಲೆಕ್ಕಪರಿಶೋಧನೆ ವರದಿ ಓದುವುದರೊಂದಿಗೆ ಸಂಘದ ನೋಟಿಸ್ ಬೋರ್ಡ್‌ನಲ್ಲಿ ಇಡಲಾಗುತ್ತದೆ. ನಾವುಗಳುಪ್ರತಿತಿಂಗಳು ಸೇರಿಕಾರ್ಯಕಾರಿ ಮಂಡಳಿ ಸಭೆಗಳನ್ನು ನಡೆಸಿ ಈ ಸಂಘದ ಬೆಳವಣಿಗೆಯತ್ತ ಹೆಜ್ಜೆ ಇಡುತ್ತಿದ್ದೇವೆ. ವಿದ್ಯಾ ಸಂಘದ ಕಟ್ಟಡದಲ್ಲಿ ವಿವಾಹಕ್ಕೆ ಬಾಡಿಗೆ ಕೊಟ್ಟಾಗ ಜನರಿಗೆ ನೀರಿನ ತೊಂದರೆಯುಂಟಾಗಿ ಜನರಿಂದ ಪುಕಾರುಗಳು ಕೇಳಿ ಬಂದಾಗ ತಕ್ಷಣವಲ್ಲದಿದ್ದರೂ ಸ್ವಲ್ಪ ತಡವಾಗಿ ಸ್ಪಂದಿಸಿ ನಮ್ಮ ಈಗಿನ ಕಾರ್ಯಮಂಡಳಿ ಜನಾಂಗದ ಜನರಿಂದ ಕೊಡುಗೆಗಳನ್ನು ಪಡೆದು ಬೋರ್‌ವೆಲ್ ತೆಗೆಸಿ ನೀರಿನ ಕೊರತೆ ನೀಗಿಸಿದ್ದೇವೆ. ವಿದ್ಯಾರ್ಥಿ ವೇತನ ನಿಧಿಯನ್ನು ಹೆಚ್ಚಿಸಿದ್ದೇವೆ. ಕಟ್ಟಡದ ಒಂದು ಪಾರ್ಶ್ವಕ್ಕೆ ಕಾಂಪೌಡ್‌ಗೋಡೆ ಕಟ್ಟಿಸಲಾಗಿದೆ. ಊಟದ ವ್ಯವಸ್ಥೆಗೆ ಅನುಕೂಲವಾಗುವಂತೆ ಸಿಮೆಂಟಿನ ಕಟ್ಟೆಕಟ್ಟಿಸಿದ್ದೇವೆ.ಆಕರ್ಷಕಕುರ್ಚಿಗಳನ್ನು ಖರೀದಿಸಿ ಸೌಲಭ್ಯ ಒದಗಿಸಿದ್ದೇವೆ.ದಾನಿಗಳಿಂದ ಪಡೆದು ಉತ್ತಮಗೇಟೊಂದನ್ನು ನಿರ್ಮಿಸಲಾಗಿದೆ. ಮತ್ತು ಕಟ್ಟಡಕ್ಕೆಹೋಗುವ ವಾಹನಗಳಿಗೆ ಏಕಮುಖ ಮಾರ್ಗಕ್ಕೆ ವ್ಯವಸ್ಥೆ ಮಾಡಲಾಗಿದೆ. ಆಗಿಂದಾಗ್ಗೆ ಸುಣ್ಣ ಬಣ್ಣಗಳನ್ನು ಬಳೆಯುತ್ತಿದ್ದೇವೆ. ಯಾವ ಫಲಾಪೇಕ್ಷೆಗಳನ್ನು ಪಡೆಯದೆ ಸಂಘದ ಸರ್ವಾಂಗೀಣಾ ಬೆಳವಣಿಗೆಗಾಗಿ ಕಾರ್ಯ ನಿರ್ವಹಿಸುತ್ತಿದ್ದೇವೆ.

ಹೇಳಿ ಇಂದ್ರಕುಮಾರರವರೇ, ಇನ್ನೇನನ್ನು ನೀವು ನಮ್ಮಿಂದ ನಿರೀಕ್ಷಿಸುತ್ತಿದ್ದೀರಿ ? ವಾರ್ಷಿಕವಾಗಿ ನಮ್ಮ ಸಂಘದ ಉತ್ಪತ್ತಿಯನ್ನು ಸದುಪಯೋಗಪಡಿಸಲು ಮತ್ತು ಉತ್ಪತ್ತಿಗಳನ್ನು ಅಭಿವೃದ್ಧಿ ಪಡಿಸಲು ನಿಮ್ಮಲ್ಲಿ ಅದಾವ ಸಲಹೆಗಳಿವೆ ? ಸಂಘದ ಅಭಿಗಾಗಿ ನೀವು ಕಾರ್ಯಪ್ರವರ್ತರಾಗುವುದಾದರೆ ವಿದ್ಯಾ ಸಂಘವು ನಿಮ್ಮನ್ನು ಆಹ್ವಾನಿಸುತ್ತಿದೆ. ಇದು ಬಿಟ್ಟು ವಿಷಯವರಿಯದೆ ಗೌಡ ವಿದ್ಯಾ ಸಂಘದ ಕಾರ್ಯಕಾರಿ ಮಂಡಳಿಯನ್ನು ನೀವು ಜರೆದಿರುವುದು ಉತ್ಸಾಹದಿಂದ ಕಾರ್ಯನಿರ್ವಹಿಸುತ್ತಿರುವ ಸಂಘದ ಅಧ್ಯಕ್ಷರು ಮತ್ತು ಕಾರ್ಯಕಾರಿ ಮಂಡಳಿಯ ಎಲ್ಲಾ ನಿರ್ದೇಶಕರ ಮನಸ್ಸನ್ನು ನೋಯಿಸಿದೆ. ●

## ಗೌಡ ಸಮಾಜ ಬೇಕ್

ಸನ್ಮಾನ್ಯ ಸಂಗಾತಿಯಕ್ಕಂಗೆ,

ನಮ್ಮ ಭಾಷೆ, ಸಂಸ್ಕೃತಿ ಆಚಾರ–ವಿಚಾರ, ಕಟ್ಟ್‌ಪಾಡ್‌ಗೆಲ್ಲಾ ಅವಸಾನದ ಅಂಚಿಗೆ ಹೋಗ್‌ತ್ತ್. ಅಂತ ಸಮೇಲಿ 'ಫೀನಿಕ್ಸ್' ಹಕ್ಕಿನಂಗೆ ತಲೆ ಎತ್ತಿ ನಿತ್ತ ನನ್ನ ನೆಚ್ಚಿನ ಪತ್ರಿಕೆ "ಕೊಡಗು ಸಂಗಾತಿ"ಂದ ಬಾಳ ಉಪಕಾರ ಆಗ್ತಾವುಟ್ಟು. ಇಷ್ಟೆಲ್ಲಾ ಆದ್ರೂ ಈ ಪತ್ರಿಕೆಗೆ ನಮ್ಮ ಜನ ಬರಿಯಕೆ ಹಿಂದೆ ಮುಂದ

ನೋಡ್ತಾ ಒಳೊ. ತುಂಬಾ ಒಳ್ಳ ಬರಹಗಾರ್‌ರಿಗೆ ಈ ಪತ್ರಿಕೆಗೆ ಬರಿಯಕೆ ಏನೋ ಒಂದು ತರದ ಮುಜುಗರ. ಯಾಕೆಂತೇಳ್ರೆ, ನಾನೊಬ್ಬ ದೊಡ್ಡ ಬರಹಗಾರಂತೇಳ್ವ ಅಹಂಕಾರ. ಈ ಪತ್ರಿಕೆ ನಮ್ಮ ಜನಾಂಗಕ್ಕೆ ಈ ಶತಮಾನದ ಅಂತ್ಯಲಿ ಕಂಡ ಒಂದು ದೊಡ್ಡ ತಿರುವುತೇಳ್‌ಕ್. ಹಂಗಾಗಿ ನಮ್ಮ ಜನಾಂಗದ ಪ್ರತಿಯೊಬ್ಬರೂ ಸ ತಕಂಡ್ ಓದಕು. ಮತ್ತೆ ಮತ್ತೆ ದುಡ್ಡು ಕೊಟ್ಟ್ ನವೀಕರಣ ಮಾಡಕು. ಇಲ್ಲದಿದ್ದರೆ ಪತ್ರಿಕೆನ ಸಂಪಾದಕರ್ ಹೆಂಗೆ ನಡ್ಸುದು ನೀವೆ ಹೇಳಿ. ಅವು ಈಗ ನಮ್ಮ ಜನಾಂಗದ ಆಸ್ತಿ. ಅವರ್ನ ಲಾಯ್ಕಾಗಿ ನೋಡಿಕಂಬದು ನಮ್ಮ ಧರ್ಮ ಮತ್ತೆ ಕರ್ತವ್ಯ ಸ ಹೌದು.

ಹಂಗೆನೆ ನಮ್ಮ ವಿರಾಜಪೇಟೆ ತಾಲ್ಲೋಕ್‌ಲಿ ಒಂದು ಗೌಡ ಸಮಾಜತೇಳ್ವು ಇಲ್ಲೆ. ಜನರ ಆಸೆ ಆಕಾಂಕ್ಷೆಗೆ ಒತ್ತು ಕೊಡಿಕೆ ಆದುಲೆ. ನಮಿಗೆ ವಿರಾಜಪೇಟೆಲಿ ಒಂದು ಸಮಾಜ ಬೇಕೆ ಬೇಕ್ ಇದ್ಕೆ ಯಾರ್ಯಾರ್ ಒತ್ತ್ ಕೊಡುವೊ, ಯಾರ್ಯಾರ್ ಸಹಾಯ ಮಾಡುವೊ, ಏನ್ ಎಂತತೇಂಳ್ವ ವಿಷ್ಯನ ಸಂಗಾತಿ ನಮಿಗೆ ತಿಳ್ಸಿರೆ ಬಾಳ ಒಳ್ಳದಿತ್ತ್.

ಇಂತಿ ಕೊಡಗು ಸಂಗಾತಿನ ನೆಚ್ಚಿನ ಓದುಗ
**ಬಾರಿಕೆ ಮನು ಸ ಬ್ಬಯ್ಯ**
ಇಗ್ಗುತಪ್ಪ ಕೋಲ್ಡ್ ಸ್ಟೋರೇಜ್
ಬಸ್‌ಸ್ಟ್ಯಾಂಡ್, ವಿರಾಜಪೇಟೆ

ನಿಮ್ಮ ಅಭಿಪ್ರಾಯ ಬಾಳ ಒಳ್ಳದ್. ಈ ಸಂಗತಿಲಿ ನೀವು ಪ್ರಯತ್ನಿಸಿ. ನಾವು ನಿಮ್ಮ ಹಿಂದೆ ಒಳೊ. ನಿಮ್ಮಂತ ಅಭಿಮಾನಿಗಳ ಯುವ ಶಕ್ತಿಗ ಮಾತ್ರ ನಮ್ಮ ಈ ಸಮಾಜನ ಮ್ಯಾಲಕ್ಕೆ ಎತ್ತಿಕೆ ಸಾಧ್ಯ. ಮನುಷ್ಯಂಗೆ ಹಣ ಮಾತ್ರ ದೊಡ್ಡದಲ್ಲ. ಉದಾರತನ ಸ ಬೇಕು.

**-ಸಂಪಾದಕಿ**

**ಗೌಡ ಸಮಾಜಗಳ ಲೆಕ್ಕ ಪತ್ರ ಎಲ್ಲಿ ? ಸಂಚಿಕೆ 10ರಲ್ಲಿ ಪ್ರಕಟಗೊಂಡ ಇಂದ್ರಕುಮಾರ್‌ರವರ ಹೇಳಿಕೆಗೆ ಕೊಡಗು ಗೌಡ ಸಮಾಜ, ಮಡಿಕೇರಿ ಇದರ ಅಧ್ಯಕ್ಷರಿಂದ ಸ್ಪಷ್ಟನೆ.**

ಗೌಡ ಸಮಾಜ ಮಡಿಕೇರಿ, ಇದರ ಕಾರ್ಯಕಾರಿ ಮಂಡಳಿ ಸದಸ್ಯರು ಜನಾಂಗದ ಜವಾಬ್ದಾರಿಯುತ ಸ್ಥಾನದಲ್ಲಿರುವವರು. ಸಮಾಜದ ಹಿರಿಯರೊಡಗೂಡಿ ಅನೇಕ ವರ್ಷಗಳಿಂದ ಸಮಾಜಕ್ಕಾಗಿ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದವರು. ಅಲ್ಲದೆ ಸಮಾಜದ ಏಳಿಗೆಗಾಗಿ ಅವಿರತವಾಗಿ ಶ್ರಮವಹಿಸಿ ಪ್ರಾಮಾಣಿಕವಾಗಿ ದುಡಿಯುವವರು.

ಸದ್ಯದಲ್ಲೆ ಈ ಸಮಾಜದ ಲೆಕ್ಕಪತ್ರವನ್ನು ಮಹಾಸಭೆ ಕರೆದು, ಅದರ ಮಂಡಿಸಲಾಗುವುದು. ಸಮಾಜದ ಕೆಲವು ಮುಖ್ಯವಾದ ಮತ್ತು ತ್ವರಿತವಾದ ಅಭಿವೃದ್ಧಿ ಕಾರ್ಯಗಳು ನಡೆಯಬೇಕಾದುದ್ದರಿಂದ ಅದರ ಬಗ್ಗೆ ನಿಗಾ ವಹಿಸಬೇಕಾಯಿತು. ಲೆಕ್ಕ ಪತ್ರಗಳ ಪರಿಶೋಧನಾ ಕಾರ್ಯವು ನಿಧಾನಗತಿಯಲ್ಲಿ ನಡೆದುದ್ದರಿಂದ ಈ ವಿಳಂಬಕ್ಕೆ ಕಾರಣವಾಯಿತು.

ಸಮಾಜಕ್ಕೆ ಜಮವಾದ ಎಲ್ಲಾ ಹಣದ ಸದುಪಯೋಗವಾಗಿದೆ ಈ ಬಗ್ಗೆ ಆಸಕ್ತರಿಗೆ ಸದ್ರಿ ಲೆಕ್ಕ ಪತ್ರಗಳ ಪರಿಶೋಧನೆಗೆ ಅವಕಾಶವಿದೆ. ಆದ್ದರಿಂದ ಈ ಬಗ್ಗೆ ಯಾವುದೇ ವಿಧವಾದ ಸಂಶಯಕ್ಕೆ ಆಸ್ಪದವಿಲ್ಲ,

ನಮ್ಮದೇ ಆದ ಸಮಾಜಗಳ ಮೇಲೆ ಆರೋಪ ಮಾಡಿ ಚ್ಯುತಿಗೆ ಕಾರಣವಾಗುವಂತಹ ಹೇಳಿಕೆಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುವಾಗ ಆರೋಪಗಳ ಬಗ್ಗೆ ಪರಿಶೀಲಿಸಿ, ಪರಾಂಭರಿಸಿ ಪ್ರಕಟಿಸುವುದು ಸೂಕ್ತವೆಂದು ಕರ್ಯಕಾರಿ ಮಂಡಳಿಯು ಅಭಿಪ್ರಾಯಪಡುತ್ತದೆ.

**ಅಧ್ಯಕ್ಷರು**

ಮಾನ್ಯರೆ,

ಕಳೆದ ಏಪ್ರಿಲ್ 12ರಂದು ಮೈಸೂರಿನಲ್ಲಿ ನಡೆದ ಗೌಡ ಸಾಂಸ್ಕೃತಿಕ ಸಮಾವೇಶದಲ್ಲಿ ಭಾಗವಹಿಸಲು ಅತೀ ಸಂತೋಷದಿಂದ ಹೊರಡುವವನಿದ್ದೆ. ಹಿಂದಿನ ದಿವಸ ಶ್ರೀ ಎಂ. ಸಿ. ವಾಸುದೇವ ಮತ್ತು ಕೆ.ಟಿ. ಸುಬ್ಬಯ್ಯನವರಿಗೆ ಫೋನು ಮಾಡಿ ಜತೆಯಲ್ಲಿ ಬನ್ನಿರೆಂದು ಹೇಳಿದ್ದೆ. ಆದರೆ, 12 ರಂದು ಬೆಳಿಗ್ಗೆ 4 ಗಂಟೆಗೆ ಕಾಣಿಸಿಕೊಂಡ ಜ್ವರದ ತೀವ್ರತೆ ಕೂಡಲೇ ಡಾಕ್ಟರನ್ನು ಮನೆಗೆ ಕರೆಸಿಕೊಳ್ಳುವಂತೆ ಮಾಡಿತು. ನಮ್ಮ ಕಡೆ ಮಲೇರಿಯಾದಿಂದ ಈಗಾಗಲೇ ಹತ್ತಾರು ಜನ ಸತ್ತಿದ್ದಾರೆ. ಡಾಕ್ಟರ್ ನನ್ನ ರಕ್ತ ಪರೀಕ್ಷೆಯಾಗದೆ ಎಲ್ಲೂ ಹೋಗಬಾರದೆಂದು ನಿರ್ಬಂಧಿಸಿದರು. ಈ ವಿಚಾರ ಫೋನು ಮೂಲಕ ನಿಮಗೆ ತಿಳಿಸಿದ್ದೇನೆ.

20-5-98 **ಎನ್.ಎಸ್. ದೇವಿಪ್ರಸಾದ್**
ಸಂಪಾಜೆ

## ವಿನಂತಿ

ಮಾನ್ಯರೆ,

ಮೂಲತಃ ಕೊಡಗಿನವರಾದ ನಮಗೆ ನಮ್ಮ ಜನಾಂಗವು ಆಚರಿಸುವ ಹಬ್ಬಗಳ ವೈವಿಧ್ಯತೆ, ಪದ್ಧತಿ ಹಾಗೂ ಜನಾಂಗದ ಅಭಿವೃದ್ಧಿಯ ಬಗ್ಗೆ ಸಾಕಷ್ಟು ಮಾಹಿತಿ ನೀಡಬೇಕೆಂದು ವಿಂತಿಸಿಕೊಳ್ಳುತ್ತೇನೆ.

ಅಮೆ ದೇವಪ್ಪ ನವೀನ್, ಮಡಿಕೇರಿ

**ಅರೆ ಭಾಷಿಕ ವಿಭಾಗ**

# ಕರಿ ಚಿನ್ನ

## ಧಾರವಾಹಿ - 7

**ಮೂಲಕಥೆ : ಅಶ್ವಥಿ ಅರವಿಂದ್**

**ಅರೆಭಾಷೆಗೆ : ಎಂ.ಇ. ಮುಹಮ್ಮದ್**

ಪ್ರೀತಿಯ ಪೂಪ್ಪ,

ಕಾಗ್ದ ನೋಡಿ ನನ್ನ ಬೈಬಡ. ಈ ರೀತಿ ನಾನ್ ಕಾಗ್ದ ಬರ್ದದಕ್ಕೆ ಮೊದ್ಲ್ ನನ್ನ ಕ್ಷಮಿಸ್ಸಿ. ಅವ್ವ ಸತ್ತ ಮ್ಯಾಲೆ ನಾವ್ಗೆ ಒಂದ್ ಚೂರು ಕೂಡ ಬೇಜರ ಆಗ್ದಂಗೆ ನೀನ್ ನಮ್ಮನ ಸಾಕಿಕಂಡ್ ಬಂದೊಳ. ಯಾಗೊಳು ನಾವ್ಗೆ ಒಳ್ಳೆದೆ ಕಲಿಸೊಳ. ಆದ್ರೆ ನಾನ್ ನಮ್ಮ ನಾಡ್‌ಕೊಲ್ಲಿ ಮನೆತನಕ್ಕೆ ಕೆಟ್ಟ ಹೆಸ್ರ್ ತಂದ್‌ಬುಟ್ಟೆ. ದಯವಿಟ್ಟ್ ಕ್ಷಮಿಸ್ಬುಡು ಪೊಪ್ಪಾ. ನಾನ್ ಬಾಚಿಮಲೆ ರಂಜನ್‌ನ ಪ್ರೀತಿಸ್ಬುಟ್ಟೆ. ಅವನ ಬುಟ್ಟ್ ಬದ್ಕಿಕ್ಯಾಗ್ದೆ ಅಂವನೊಟ್ಟಿಗೆ ಹೊರ್ಟ್ಟೊಳೆ. ರಂಜನ್ ಕರಿಯ್ಮನ ಬಾಡ್ಲೀತ ಹೇಳ್ಕೆ ನನ್ನಿಂದ ಆತ್ಲೆ. ನನ್ನ ಪರಿಸ್ಥಿತಿ ಹಂಗಿತ್ತ್. ನಾವಿಬ್ಬರೂ ರಿಜಿಸ್ಟ್ರ ಮೊದ್ವೆ ಮಾಡ್ಕಂಡ್ ಇರೊನಾಂತ ರಂಜನ್‌ಹೇಳ್ತ್ ಈ ಕಾಗ್ದನ ದಯವಿಟ್ಟ್ ಮೂರಂಗೂ ತೋರ್ಸೊಕು. ನಂಗೆ ಮತ್ತೆ ರಂಜನ್‌ಗೆ ಒಳ್ಳೆದಾಗ್ಲೀತ ನೀವಿಬ್ಬರೂ ದೇವ್ರುನ ಬೇಡಕುತ ಕೇಳಿಕಣೆ.

ನಿನ್ನ ಪ್ರೀತಿಯ
ಗೌರ

ಕಾಗ್ದ ಓದಿ ಆದ ಮ್ಯಾಲೆ ಮಾದಪ್ಪ ಮತ್ತೊಮ್ಮೆ ಅದರ ಅಕ್ಷರನ ನೋಡ್ತ್. ನೀರ್ ತುಂಬಿದ ಕಣ್ಣಿಗೆ ಅಕ್ಷರ ಕಂಡತ್ಲೆ. ಅಷ್ಟೊತ್ತಿಗೆ ಎರ್ಡ್ ಹನಿ ನೀರ್ ಕಾಗ್ದದ ಮ್ಯಾಲೆ ಬೀತ್. ತನ್ನ ಮಕ್ಕಳ ಒಳ್ಳೆದಕ್ಕಾಗಿ ಕಷ್ಟಪಟ್ಟ್ ದುಡ್ದ್, ಯಾವ ತರದ ಕಷ್ಟ ಬಾರ್ದಂಗೆ ಸಾಕಿದರ ಫಲ...!

ಅಷ್ಟರ್ಲಿ ಮೀರಂಗೆ ಎಚ್ಚರಾತ್. ಬೆಂಕಿ ಮಾಡದ ಒಲೆ ಕಂಡ್ ಅವ್ಳಿಗೆ ಸಿಟ್ಟ್ ಬಾತ್. ಅಕ್ಕನ ಸಹಾಯ ಇಲ್ಲೊದ್ರೆ ದಿನ ಕಳಿಯಕೆ ಆಲ್ಯಾ? ಅವ್ಳಿಗೆ ಬುದ್ಧಿ ಕಲ್ಸಿನೇಂತ ಗೊಣಗಿಕಂಡ್ ಬಂದ್ ಒಂದ್ ಚಿಪ್ಪಿಗೆ ಸೀಮೆಣ್ಣೆ ಹೊಯ್ದ್ ಬೆಂಕಿ ಹೊತ್ತಸಿ ಕಾಫಿಗೆ ನೀರ್ ಮಡ್ಗಿತ್.

ಇದ್ರ ಮಧ್ಯ ಅವ್ಳು ಎರ್ಡ್ ಸಲ ಅಕ್ಕನ ಕರ್ತ್. ಹಟ್ಟಲೊ, ಹಿತ್ಲ್‌ಲೊ ಗೌರಕ್ಕ ಇರ್ದೊಂತ ಅವ್ಳ ಗ್ಯಾನ.

ಕೊದ್ದ್ ಚೆಲ್ಲಿ ಒಲೆ ಕೆಟ್ಟ್ ಹೋದ್ರೂ ಮೀರ ಅತ್ತ ತಲೆ ಹಾಕಿತ್ಲೆ.

○ ○ ○

ತಲೆ ಎತ್ತಿರ್ಕ್ಯಾಗದ ನಿದ್ದೆಂದ ಗೌರಂಗೆ ಎಚ್ಚರಾತ್. ಬಿಚ್ಚಿಹೋಗಿದ್ದ ಸೀರೆನ ಸರಿಯಾಗಿ ಉಟ್ಕಂಡ್ ಕಳ್ದ ರಾತ್ರಿ ನಡ್ದದರ್ನ ಗ್ಯಾನ ಮಾಡ್ಯಾಕನ ಅವ್ಳಿಗೆ ಒಂದ್ ರೀತಿ ಹೇಸಿಕೆ ಆದಂಗಾತ್. ರಂಜನ್‌ಗೆ ಇನ್ನೂ ಎಚ್ಚರಾಗಿತ್ತ್‌ಲೆ.

> **ಕಳ್ದ ಸಂಚಿಕೆಲಿ .. ...**
>
> ರಂಜನ್ ಗೌರನ ಕರ್ಕಂಡ್ ರಿಜಿಸ್ಟ್ರ ಮೊದ್ವೆ ಮಾಡ್ಕಣ್ನೊತೇಳಿ ಜೀಪ್ ಹತ್ತಿ ದೊಡ್ಡಹೋಟ್ಲ್‌ಗೆ ಹೋತ್. ರೂಂ ನಂ. 115ರ್ಲಿ ಉಳ್ಕಂಡೊ. ಆ ರೂಂ ಒಳ್ಳೆ ಸಂಸಾರಸ್ತರ ಮನೆನಂಗೆ ಫ್ಯಾನ್, ಫೋನ್, ಕಳ್ಳ್ ಎಲ್ಲಾ ಇದ್ದ್ ಐಷಾರಾಮಾಗಿತ್ತ್. ಅಲ್ಲಿ ಅವಂಗೆ ಆ ರೂಂ ಪರ್ಮನೆಂಟಾಗಿ ಅಲ್ಲಿರುವ ಎಲ್ಲಾ ಕೆಲ್ಸದವರ್ನ ಸಗೊತ್ತಿತ್ತ್. 2 ಗ್ಲಾಸಿಗೆ ಕಳ್ಳ್ ಬಗ್ಸಿ ಒಂದರ್ನ ಗೌರಂಗೆ ಕೊಟ್ಟತ್. ಅವ್ಳ ಬ್ಯಾಡತೇಳ್ರೂ ಬಲಾತ್ಕಾರ್ಲಿ ಕುಡ್ಸಿ, ಅವ್ಳಿಗೆ ಮತ್ತೇರ್ದ ಮ್ಯಾಲೆ ಅವಳ್ನ ಇಷ್ಟಬಂದಂಗೆ ಅನುಭವಿಸಿದೆ. ಇತ್ತ ಗೌರನ ಅಪ್ಪ ಬೆಳ್ಗೆ ಬೆಡ್‌ಕಾಫಿಗೆ ಕಾದ್ ಎದ್ದ್ ನೋಡ್ರೆ ಮಗ್ಳು ಮನೆಲಿಲ್ಲೆ. ಆಗ ಬೀಡಿಗೆತೇಳಿ ಹಾಸಿಗೆ ಕೆಳ್ಗೆ ಕೈ ಹಾಕ್‌ಕನ ಒಂದ ಕಾಗ್ದ ಸಿಕ್ಕಿದೆ.
>
> ಮುಂದೆ ಓದಿ.......

"ಅಕ್ಕಾ . ..."

ಮೀರ ಸೊಲ್ಪ ಜೋರಾಗಿ ಕರ್ತ್.

"ಕರಿಬಡ ಬಾವ್ವ"

ಮಾದಪ್ಪ ಕಣ್ಣ್ ಒರ್ಸಿಕಂಡ್ ಹೇಳ್ತ್. ಗೌರನ ಕಾಗ್ದನ ಮೀರನ ಕೈಗೆ ಕೊಟ್ಟತ್.

ನಾನ್ ಹಿಂಗೇ ಗ್ಯಾನ ಮಾಡಿದ್ದೇಂತ ಹೇಳಿಕಂಡ್ ಮೀರ ಕಾಗ್ದನ ಕೇಳಿಕಣ್ತ್. ಓದಿ ನೋಡ್ಕನ ಅವ್ಳಿಗೆ ಅಳ್ಗಿಲ್ ಬಾತ್. ಅವ್ಳು ಕಾಲೇಜಿಗೆ ಹೋದರ್ನ ಮರ್ತ್ ಹಾಸಿಗೆ ಮ್ಯಾಲೆ ಮಲ್ಗಿತ್.

ಇತ್ತ ಮಾದಪ್ಪನೂ ಹಾಸಿಗೆಗೆ ತಲೆ ಕೊಟ್ಟತ್. ಒಲೆಲಿ ಕಾಫಿಗೆ ಮಡ್ಗಿದ ನೀರ್

ಗೌರ ಹಾಸಿಗೆ ಮೇಲೆ ಕುಕ್ಕುರ್‌ಕಾಲ್‌ಲಿ ಕುದ್ದ್‌ಕಂಡ್ ಎರ್ಡ್ ಮುಂಡಿಗಳ ಮಧ್ಯ ತಲೆ ಇಸಿಕಂಡ್ ತುಂಬಾ ಹೊತ್ತ್ ಗ್ಯಾನ ಮಾಡ್ತ್.

ಮತ್ತೆ ಎದ್ದ್ ಟಾಯ್ಲೆಟ್‌ಗೆ ಹೋಗಿ ಬಾತ್. ರಂಜನ್ ಹೊಸ ಸೀರೆ ರವಿಕೆ ತೆಗಿದಿರ್ದೊಂತ ಅವ್ಳು ಗ್ಯಾನ ಮಾಡಿತ್ತ್. ಆದ್ರೆ ಅವ್ಳ ನಿರೀಕ್ಷೆ ಸುಳ್ಳಾಗಿತ್ತ್. ಸ್ನಾನಮಾಡಿ ಬಂದ ಅವ್ಳಿಗೆ ಹಳೇದರ್ನೆ ಉಡೀಕಾಗಿ ಬಾತ್.

ಆದ್ರೂ ಕೂಡ ಒಂದು ಪ್ರೀತಿನ ಹೆಣ್ಣ್ ನಂಗೆ ಅವ್ಳು ರಂಜನ್ ಏಳುದರ್ನೇ ಕಾದ್

ಕಂಡ್‌ಅವನ ಕಾಲ್ಬುಡಲಿ ಕುದ್ದ್‌ಕಂಡಿತ್.

ಎಂಟ್ ಗಂಟೆಗೆ ರಂಜನ್‌ಗೆ ಎಚ್ಚರಾಗಿ ಅಂವ ಮೆಲ್ಲೆ ಕಣ್ಣ್ ಬುಟ್ಟತ್.

"ಓ... ನೀನ್ ಅಷ್ಟ್ ಬೇಗ ರೆಡಿ ಆಗಿ ಬುಟ್ಟೊಳಾ ?

ಅಂವ ಆಶ್ಚರ್ಯಂದ ಕೇಳ್ತ್. ಅದ್ಕೆ ಗೌರ ತಲೆ ಅಲ್ಲಾಡಿಸ್ತ್.

ನನ್ನ ಯಾಕೆ ಕರ್‌ತ್‌ಲೆ. ಗಂಟೆ ಎಸ್ಟಾತ್ ತೇಳಿ ವಾಚ್ ನೋಡಿಕಂಡ್ ರಂಜನ್ ಎದ್ದತ್. ಹತ್ತ್ ನಿಮಿಷಲಿ ಸ್ನಾನ ಮಾಡಿ ಬಂದ್ ಫೋನ್ ಮಾಡಿ ಬ್ರೇಕ್‌ಫಾಸ್ಟ್ ತರ್ಸಿತ್.

ಗೌರಂಗೆ ಏನೂ ಬೇಡಾಂತಾಗಿತ್ತ್. ಆದ್ರೂ ಹೆಸ್‌ಗೆತೇಳಿ ಒಂದ್ ಇಡ್ಲಿ ತಿಂದ್ ಒಂದ್ ಬರಿಲಿ ಕುದ್ದ್‌ಕಣ್ತ್.

"ಯಾಕೆ ಗೂಡೆ ಚೆಂಡಿಯಾದ ಕೋಳಿ ಸಂಗೆ ಮುದ್ರಿಕಂಡ್ ಕುದ್ದದ್. ಎಂತಾತ್ ನಿಂಗೆ? ಮಾತಾಡ್ನೇ"

ಅಸ್ಟ್ ಹೇಳಿ ಅಂವ ಇಡ್ಲಿನ ಪೊಜ್ಜಿಗೆ ಮುಟ್ಟಿಕಂಡ್ ಲಾಯ್ಕ್ ತಿಂತ್.

ನಾನ್ ಗ್ಯಾನ ಮಾಡಿದ್ದ ರಂಜನ್ ಇಂವ ಅಲ್ಲ, ನನ್ನ ಕಷ್ಟ-ಸುಖಕೆ ಆಗೋ ಗಂಡ ಇಂವ ಅಲ್ಲಾಂತ ಗೌರಂಗೆ ಗೊತ್ತಾತ್. ಮೀರ ಹಿಂದೊಮ್ಮೆ ಹೇಳ್ದ ಸತ್ಯಾಂಶ ಅವ್ಳಿಗೆ ಗ್ಯಾನಾತ್.

ಒಂಭತ್ ಗಂಟೆಗೆ ಗೌರ್ನ ಕರ್ಕಂಡ್ ರಂಜನ್ ಜೀಪ್‌ಲಿ ಹೊರ್ಟತ್.

ರಿಜಿಸ್ಟ್ರಿ ಆಫೀಸಿಗಲ್ಲ, ಒಂದ್ ಪ್ರೈವೇಟ್ ಆಸ್ಪತ್ರೆಗೆ.

ಗೌರ, ನಾವು ಮೊದ್ಲು ಒಂದು ಗೈನಾಕಾಲಾಜಿಸ್ಟ್‌ನ ಕಂಡ್ ಚೆಕ್‌ಅಪ್ ಮಾಡ್ಸಿ ಅಲ್ಲಿಂದ ರಿಜಿಸ್ಟ್ರಿ ಆಫೀಸ್‌ಗೆ ಪೋಯಿ. ಬಸ್ರಿಂತೇಳಿಯೊ ನಿನ್ನ ಅಭಿಪ್ರಾಯ ತಪ್ಪಾಗಿ ರಿಕೂ ಸಾಕ್. ಬಸ್ರಿ ಅಲ್ಲಾಂತಾದ್ರೆ ಸೊಲ್ಪ ದಿನ ಕಳ್ದ್ ಮೊದ್ವೆ ಮಾಡ್ಕಂಡ್ರೆ ಆತ್. ಡ್ಯಾಡಿಗೂ ಸಿಟ್ಟ್ ಬರುವಂಗಿಲ್ಲೆ. ಎಂತ ಹೇಳಿಯ?"

"ನಾನ್ ಎಂತರ ಹೇಳ್ದು, ನಿನ್ನ ಇಷ್ಟ ದಂಗೆ ಮಾಡ್"

ಒಂದು ನರ್ಸಿಂಗ್ ಹೋಂನ ಪೋರ್ಟಿಕೊಲಿ ಜೀಪ್ ಹೋಗಿ ನಿತ್ತತ್. ರಂಜನ್ ಅವಳ್ನ ಕರ್ಕಂಡ್ ವಿಸಿಟಿಂಗ್ ರೂಂಗೋತ್

"ಡಾಕ್ಟರ್ ಗಿರಿಧರ್ ನನ್ನ ಪರಿಚಯಸ್ಥ, ನಾನ್ ಒಮ್ಮೆ ಮಾತಾಡಿ ನೋಡ್ನೆ. ನೀನ್ ಇಲ್ಲೇ ಕುದ್ದ್‌ಕ"

ಅಂವ ಡಾಕ್ಟ್ರ ಕ್ಯಾಬಿನ್‌ಗೆ ಹೋತ್.

ಗೌರ ವಿಸಿಟಿಂಗ್ ರೂಂನ ಕುರ್ಚಿಲಿ ಕುದ್ದತ್.

"ಗುಡ್ ಮಾರ್ನಿಂಗ್ ಡಾಕ್ಟರ್"

"ಎಸ್, ಗುಡ್ ಮಾರ್ನಿಂಗ್. ಹೌ ಆರ್ ಯೂ? ಕುದ್ದ್‌ಕ"

ರಂಜನ್ ಕುದ್ದತ್.

ಕನ್ನಡಕ ಕೈಲಿ ಹಿಡ್ಕಂಡ್ ಡಾ|| ಗಿರಿಧರ್ ಕೇಳ್ತ್.

"ಏನ್ ಮಿ|| ರಂಜನ್?"

ರಂಜನ್‌ಗೆ ವಿಷಯನ ಹೆಂಗೆ ಹೇಳಕುಂ ತಲೆ ಗೊತ್ತಾತ್ಲೆ. ಅಂವ ಮೇಲೆ, ಕೆಳ್ಗೆ ನೋಡಿಕಂಡ್ ಏನೋ ಹುಡ್ಕುವಂಗೆ ಮಾಡ್ತಿತ್ತ್.

"ಡಾ|| ನಿಮ್ಮಿಂದ ನಂಗೆ ಒಂದ್ ಉಪಕಾರ ಆಕು. ನನ್ನ ಕೈಲಿ ಒಂದ್ ತಪ್ಪಾಗಿ ಹೋವುಟು ಡಾಕ್ಟ್ರ. ಅವಳ್ನ ನಾನ್ ಇಲ್ಲಿಗೆ ಕರ್ಕಂಡ್ ಬಂದೊಳೆ. ನನ್ನ ಮನೆ ಹಕ್ಕಲೆ ವಾಸ ಇರೋ ಗೂಡೆ. ಯಾಗಾರೊಮ್ಮೆ ಹತ್ತಿಪ್ಪತ್ತ್ ರೂಪಾಯಿ ಕೊಟ್ಟ್ ಹೋತಿದ್ದೆ. ಆದ್ರೆ ಅವಳೀಗ ಹೇಳ್ತಾವುಟ್ಟು ನಾನ್ ಬಸ್ರೀತ. ನಾನ್ ಅವಳ್ನ ಮೊದ್ವೆ ಆಕೊಡ. ನಾನ್ ಟೆಸ್ಟ್ ಮಾಡ್ನೆಂತೇಳಿ ಏನಾದ್ರೂ ಒಂದು ಮೊದ್ದ್ ಕೊಟ್ಟ್ ಅವ್ಳ ಹೊಟ್ಟೆಲಿ ಇರೋದರ್ನ ಕರ್ಗಿಸಿಬುಟ್ರೆ ದೊಡ್ಡ ಉಪಕಾರ ಡಾಕ್ಟ್ರ. ಇಲ್ಲದೋದ್ರೆ ಡ್ಯಾಡಿನ ಆಸ್ತಿಲಿ ನಂಗೆ ಒಂದು ಚೂರೂ ಸಿಕ್ಕುಲ್ಲೆ. ಡ್ಯಾಡಿ ನಂಗೆ ಡೀಸೆಂಟ್ ಮಗಳ್ನ ನೋಡ್ತಾ ಉಟ್ಟು. ಇದರ್ನ ಸರಿ ಮಾಡ್ದೆ ಹೋದ್ರೆ ನಂಗೆ ಫ್ಯೂಚರೆ ಇಲ್ಲೆ ಡಾಕ್ಟ್ರ. ಈಗ ಅವಳ್ನ ಬಸ್ರಿಯಾಂತ ಟೆಸ್ಟ್ ಮಾಡ್ನೋನಾಂತೇಳಿ ಕರ್ಕಂಡ್ ಬಂದೊಳೆ. ಈ ಸಂದರ್ಭನ ಹಾಳ್ ಮಾಡದೆ, ನನ್ನ ಬಚಾವು ಮಾಡೊಕು ಡಾಕ್ಟ್ರ. ಹಣ ಎಷ್ಟ್ ಬೇಕಾರ್ ಕೇಳಿ, ನಾನ್ ಕೊಟ್ನೆ.

ರಂಜನ್ ನೋಟ್ ತುಂಬಿದ್ದ ಪರ್ಸ್‌ನ ತೆಗ್ದ್ ಮ್ಯಾಜದ ಮ್ಯಾಲೆ ಮಡ್ಗಿತ್.

"ಮಿ|| ರಂಜನ್, ಎಮರ್ಜೆನ್ಸಿ ಸಂದರ್ಭಲಿ ಮಾತ್ರ ಅಭಾರ್ಷನ್ ಮಾಡಿಕೆ ಕಾನೂನ್‌ಲುಟ್ಟು. ಕಾನೂನು ತಪ್ಪಿ ನಡಿಯುಂವ ನಾನಲ್ಲ. ಆದ್ರೆ ಅಭಾರ್ಷನ್‌ಗೆ ಆ ಗೂಡೆದ್ ಒಪ್ಪಿಗೆ ಬೇಕ್. ಅವ್ಳಿಗೆ ಪರಿಹಾರಂತೇಳಿ ಸೊಲ್ಪ ದುಡ್ಡು ಕೊಟ್ಟ್ ಒಪ್ಪಿಸಿಕೆ ಆವುಲ್ಯಾ?"

ಡಾ|| ಕೇಳ್ತ್.

[ಸಶೇಷ]

## ಅಪ್ಪನ ಯಾಕೆ ಬೇಸಿಕೆ ಬೊತ್ತ್

ಒಂದ್ ದಿನ ಅಪ್ಪಂಗೆ ಜ್ವರ ಬಂದ್ ಮಲ್ಗಿತ್ತ್. ಆಗ ಅಪ್ಪ ಅವ್ವನ ಕರ್ದ್ ಕುಡಿಯಕೆ ಬಿಸಿ ನೀರ್ ಕೊಡುತೇಳ್ತ್. ಅವ್ವ ನೀರ್ ಕಾಸ್‌ಕಾಕನ ಮಗ್ಗು ಬಂದ್ ಎಂತಕೆ ನೀರ್ ಕಾಸುದುತ ಕೇಳ್ಕನ ಅಪ್ಪಂಗೆ ಜ್ವರ ಬಂದದಕ್ಕೆ ಕುಡಿಯಕೆ ನೀರ್ ಕುದ್ಸಿ ಕೊಡಕು. ಇಲ್ಲರೆ ನೀರ್ಲಿರುವ ಹುಳಗ ಹೊಟ್ಟೆಗೆ ಹೋದವೆ ತೇಳ್ತ್. ಆಗ ಮಗ್ಗು ಅಪ್ಪನೇ ಕೊದಿವ ನೀರಿಗೆ ಹಾಕಿರೆ ಹುಳಗಳ ಒಟ್ಟಿಗೆ ಕೊಲ್ಲಕ್ಕಲಾತೇಳ್ತ್.

○ ನೀತಾ, ಬೆಂ.

# ಕೊಯಿಲೆ ಗೂಡೆನ ಗುಳಿಗ ಹೊತ್ತ್‌ದ್

ಮಡಿಕೇರಿ ಬಸ್ ಸ್ಟ್ಯಾಂಡ್‌ಲಿ ಬಸ್ಸಿಗೆ ಪಾರ ಕಾದ್‌ಕಂಡ್ ಕುದ್ದಿದ್ದೆ. ಸುಟ್ಟ ಬಸ್ ಬಾತೇಲೆ. ಕೂಸಿಗೆ ಮಿಠಾಯಿ ತೆಗ್ದ್ ಕೊಡಿಕೆತ ಅಂಗ್‌ಡಿಗೆ ಪೋದೆ. "ಕೊಡಗು ಸಂಗಾತಿ"ತ ಒಂದು ಪುಸ್ತಕ ನೋಡ್ದೆ. 5 ರೂಪಾಯಿ ಕೊಟ್ಟ್ ತಕಂಡ್ ಹಾಳೆ ಮಗ್ಚ್‌ಕನ ಶ್ರೀಮತಿ ಧರಣಿನವು "ಪೀಡೆ–ಪಿಶಾಚಿ ಉಟ್ಟಾ"? ಅಂತೇಳಿ ಬರ್ದ ಲೇಖನ ಕಂಡೆ, ಓದಿ ನೋಡ್ದೆ. ನಂಗೆ ಸಿಟ್ಟ್ ಬಂದ್ ಬುಡ್ತ್. ಎಂತಕತೇಳ್ರೆ, ಈಗಿನವು ಹಣ್ಣ ಸೈನ್ಸ್–ಗೀನ್ಸ್ ಓದಿದವು. ದೆವ್ವ, ಕೊಳಿ, ಪೀಡೆ, ಪಿಶಾಚಿ ಇದೆಲ್ಲಾ ಸುಳ್ಳುತ ವಾದ ಮಾಡ್ವೆ. ಆಗ ನಾವೆಲ್ಲ ಕೆಮಿಲಿ ಕೇಳ್ದ ಮಾತೇನೊ ಸುಳ್ಳಾಕೆ ಸಾಕಪ್ಪ! ಕಣ್ಣಾರೆ ಕಂಡದ್, ಅನುಭವಿಸಿದೆಲ್ಲಾ ಸುಳ್ಳಾ? ನನ್ನ ಸ್ವಂತ ಅನುಭವಗಳ್ನೆಲ್ಲಾ ಹೇಳ್ರೆ ಮಕ್ಕ ಉರ್ಚಿಕಂಬೊ. ಸದ್ಯಕೆ ಒಂದು ಸಂಗತಿನ ಹೇಳ್ನೆ ಕೇಳಿ.

ಕಳ್ದ ಸೋಣ ತಿಂಗಲಿ ನಮ್ಮಲ್ಲಿ ಹಸಾರ್ಯ (ಹರಿಸೇವೆ) ಕ್ಕೆ ಏರ್ಪಾಡ್ ಮಾಡ್ಡೊ. ಕಾಗ್ದ ಪ್ರಿಂಟಾತ್. "ಬಾರಿಕೆ ಅಣ್ಣ ಕೂಸು ಸಣ್ಣಪ್ಪನಲ್ಲಿಗೆ ಹಸಾರ್ಯದ ಕಾಗ್ದ ಕೊಟ್ಟ್ ಬಾ" ತ ಅವ್ವ ಕಳ್ಸಿತ್. ಅದೇನ್ ಹಣ್ಣ ದೂರ ಉಟ್ಟಾ? ಜೋಡಿ ಚಾಕಟೆ ಚಡಾವು ಹತ್ತಿ ಆಕನ ಕಾಲ್ ಬಿದ್ದೋದೆ. ಕತ್ತಲಾಕೆ ಮುಂದೆ ಬಂದ್‌ಬುಟ್ನೆಂತೇಳಿ ಬ್ಯಾಗ ಹೋದೆ. ಕಾಗ್ದ ಕೊಟ್ಟ್, ಅದ್–ಇದ್‌ಂತೇಳಿ ಮಾತಾಡಿ ಆಕನ ಸೂರ್ಯ ಕಂತಿತ್. "ಇಂದ್ ಹೋಬಡಣ್ಣಾ, ಕತ್ತಲಾತ್, ಅಮಾಸೆ ಬ್ಯಾರೆ. ಬೊಳ್ಪಿಗೆ ಎದ್ದ್ ಹೋಬುಡು"ಂತೇಳ್ತ್ ಸಣ್ಣವ್ವ. "ಇಲ್ಲೆ ಸಣ್ಣವ್ವ, ಅವ್ವ ಬೊಯ್ದುದ"ಂತೇಳಿ ಪೂರ ಟೇಬುಟ್ಟೆ. ಅರ್ಧ ದಾಂಗೆ ಬಾಕನ ಕತ್ತಲಾಗೋತ್ತು. ಕಣ್ಣಿಗೆ ಕೈ ಹೆಟ್ಟರೆ ಸನ ಕಾಂಬೊದ್ಲೆ. ಒಂದು ಕಡಂಗ್ ದಾಟ್‌ಕನ ಹೊಣ್ಕೆ ಬಿದ್ದೆ. ಮತ್ತೊಮ್ಮೆ ಎಡ್ಗಿ, ರಟ್ಟೆ ಹೋದೆ. ಸ್ವಲ್ಪ ಹೆದ್ರಿಕೆ ಆತ್. ಹೆಂಗಾರ್ ಹಸ್ಕಂಡೋಗಿ ಹೊಸಾರೆ ಸಣ್ಣಮತ್ತೆನ ಮನೆಂದ ಸೂಟೆನೊ, ಹೊತ್ತೆನೊ ಕೊಟ್ಟದರ್ನ ತಕಂಡ್ ಹೋನೆತ ಸಣ್ಣಮ್ಮತ್ತೆನ ಮನೆ ದಾರಿ ಹಿಡ್ದೆ.

ಸಣ್ಣಮ್ಮತ್ತೆಗೆ ಗಂಡ್ ಮಕ್ಕ ಇಲ್ಲೇಂತೇಳಿ ಮನೆಯವು ಭೂಮಿನೆಲ್ಲ ಪಾಲಾಕಂಡ್ ಜೀವನಕ್ಕೆ ಕೊಡ್ತಿದ್ದೊ. ದೊಡ್ಡ ಮನೆಲಿ ಕ್ಯಾಂಬರೆ ಕೊಡದೆ ಹೊಸಾರೆಲಿ ಎರ್ಡ್ ರೂಂಲಿ ಜಾಗ ಮಾಡಿ ಕೊಟ್ಟಿದ್ದೊ. ಸಣ್ಣಮ್ಮತ್ತೆ ಬಾಲ್ಯಲಿ ಆಡದ ಆಟ ಇಲ್ಲೆ. ಕೊಣಿಯುವ ಕೊಣ್ತ ಇಲ್ಲೆಂತ ಅತ್ತೆನ ಆಗವವು ಹೇಳ್ತಿದ್ದೊ. ಅತ್ತೆನ ಮಗ ಕೊಯಿಲೆ ಗೂಡೆ ಐದಾರ್ ವರ್ಷಂದ ಟ್ಯುಟೋರಿಯಲ್ಗೆ ಹೋದೆ. ಆರೇಳ್ ಸಲ ಎಸ್‌ಎಸ್‌ಎಲ್‌ಸಿಗೆ ಕಟ್ಟಿ ಇನ್ನ್ ಮೂರೇ ಸಬ್ಜೆಕ್ಟ್ ಬಾಕಿ ಗಡ. ಜಡೆ ಉದ್ದಾಗಿ, ಸೊಂಟ ಚುರುಂಗಿ ಕೊಯಿಲೆನಂಗೆ ಉಟ್ಟ್. ಒಮ್ಮೆ ನೋಡ್ರೆ ಪತ್ತ್‌ದಪ್ಪ ನೋಡಕುತಾದೆ.

ಅತ್ತೆನ ಗಂಡ ಸತ್ತ್ ಲಾಗಾಯ್ತ್ ಮನೆಯವು ಅವರ ಕುಟುಂಬದ ಗುಳಿಗಂಗೆ ಕೊಡದೆ ಮಾಡ್ಡೊ. ಇಡಿ ಊರೇ ಹೇಳ್ವೆ ಅದ್ ಭಾರಿ ಕಠಿಣ ಗುಳಿಗಾತ. ವರ್ಸೋಳು ಕೋಳಿ, ಹಂದಿ ಕೊಯ್ಕಂಡ್ ಇರ್ಕನ ಸಮಾಧಾನ ಇತ್ತ್. ಮತ್ತೆ ಮನೆಲಿ ಒಳ್ಳ ಬರ್ಕತೂ ಇತ್ತ್‌ಗಡ. ಯಾಗ ಗುಳಿಗಂಗೆ ಕೊಡ್ದು ಬುಟ್ಟೊ ಅಂದ್‌ಂದಲೆ ದಿನಕ್ಕೊಂದು ಉಪದ್ರ ಸುರಾತ್. ಕೋಳಿ ಕಾಣದೇ ಆದು, ಮೇಯಕೆ ಹೋದ ದನ ಕಾಣದಾದು, ಕತ್ತಲಾದ ಮ್ಯಾಲೆ ಜನರ ದಾರಿ ತಪ್ಪುಸುದು ಹಿಂಗೆ ಭಾರೀ ಉಪದ್ರ. ಶುಕ್ರವಾರ, ಮಂಗಳವಾರ, ಅಮವಾಸೆ ದಿನಲೆಲ್ಲ ಗುಳಿಗನ ಉಪದ್ರ ಹೇಳ್ಟೇ ಬ್ಯಾಡ.

ನನ್ನ ಗ್ರಾಚಾರಕ್ಕೆ ಅಂದ್ ಶುಕ್ರವಾರ ಅಮಾಸೆ ಒಟ್ಟೊಟ್ಟಿಗೆ! ಮತ್ತೆ ಹೇಳೊಕಾ? ಅತ್ತೆ ಮನೆ ಓಣಿ ಹತ್ತ್‌ಕನ ಹತ್ತ್ ಮಾರ್ ದೂರಲಿ ಹಲ್ಸಿನ ಮರ ಬುಡಲಿ ಬೆಂಕಿ ಹೊತ್ತಿದಂಗೆ ಕಂಡೆ. ಒಬ್ಬ ಕುದ್ದ್‌ಕಂಡಿದ್ದಂಗೆ ಕಂಡೆ. ನನ್ನ ಕೈಕಾಲೆಲ್ಲ ಮರಗಟ್ಟಿ ಹೋತ್. "ಸಣ್ಣಮ್ಮತ್ತೆ"ಂತ ಕರ್ಕಂಡ್ ಎದ್ದ್ ಬಿದ್ದ್ ಓಡಿ ಹೊಸಾರೆಗೆ ಹತ್ತಿ ಕರ್ದೆ. "ಯಾರ್ನೆ, ಈ ಕತ್ತಲೆಲಿ ಬಂದವು"ತ ಅತ್ತೆ ಕೇಳ್ತ್. ದೀಪ ಕೆಡ್ಸಿ ಎಲ್ಲ ಮಲ್ಗಿದ್ದೊ. ನನ್ನ ಹೆಸ್ರ್ ಹೇಳ್ದೆ. ಆಗ ಅತ್ತೆ "ಅಯ್ಯೊ, ಈ ಹೊತ್ತ್‌ಲಿ ಬಂದಾ ಮಜ? ಯಾರಿಗೆ ಏನಾತೊ ಏನೊ! ಅಮಾಸೆ ಬ್ಯಾರೆ"ತ ಗಾಬ್ರಿಲಿ "ರಾಣಿ ಒಮ್ಮೆ ದೀಪ ಹೊಸವ್ವ"ತ ಹೇಳ್ತ್. [ಎಲ್ಲವು ಕೊಯಿಲೆತ ಕರ್ದರೆ ಅತ್ತೆ ಮಾತ್ರ ರಾಣೀತ ಕರೆತಿತ್ತ್.

ಗೂಡೆದ್ ಸದ್ದೇ ಇಲ್ಲೆ. ಮೂರ್ನಾಕ್ ಸರ್ತಿ ಕರ್ದರೆ ಗೂಡೆ ಓಂಕಂಬದೂ ಇಲ್ಲೆ, ಮಸ್ಕೂದೂ ಇಲ್ಲೆ.! ಅತ್ತೆ ದೀಪ ಹೋಸಿ ಎದ್ರ್ ರೂಂಗೆ ಬಂದ್ ನೋಡ್ರೆ ಕಟ್ಲ್‌ಲಿ ಗೂಡೆ ಇಲ್ಲೆ.! "ಅಯ್ಯೊ, ನನ್ನ ಕೂಸು ಎಲ್ಲಿ"ತ ಬಂದ್ ಬಾಗ್ಲ್‌ನ ತಾಳ ತೆಗಿಯಕೆ ನೋಡ್ರೆ ಬಾಗ್ಲ್ ತಾಳ ಹಾಕದೇ ಹಂಗೆ ಮುಚ್ಚಿಕಂಡುಟ್ಟ್! ನನ್ನ ಕಂಡಾಕನ ಸ್ವಲ್ಪ ಧೈರ್ಯತಕಂಡ್ "ಅಯ್ಯೋ, ಇದ್ ಗುಳಿಗನ ಕೆಲ್ಸ. ಈ ಹಾಳಾದ ಮನೆಯುವರ ಸಂತಾನ ಮುತ್ತಿಕೆ. ಗುಳಿಗಂಗೆ ಕೊಡದೆ ಇದ್ದದಕೆ ಇದೆಲ್ಲ ಉಪದ್ರ. ಹಂದಿ, ಕೋಳಿ ದನ ಎಲ್ಲಾ ಹೋಗಿ ಈಗ ನನ್ನಂತ ಗತಿ ಇಲ್ಲದವಳ ಮ್ಯಾಲೆ ಈ ಗುಳಿಗನ ದೃಷ್ಟಿಬೀತಲೆ"ತ ತಲೆಗೂ ಎದೆಗೂ ಹೊಡ್ಕಂಡ್ ಮರ್ಗತ್.

ಅತ್ತೆನ ರಂಪ ಕೇಳಿ ದೊಡ್ಡ ಮನೆಂದ ಇಬ್ಬರು ಲೈಟ್ ತಕಂಡ್ ಬಂದೊ. ಅಂಗಳ ಬಾಳೆ ತೋಟಕೆಲ್ಲಾ ಲೈಟ್‌ಬುಟ್ಟೆ, ಹಲ್ಸಿನ ಮರದ ಬುಡಲಿ ಗುಳಿಗನ ಕಲ್ಲಿದ್ದಲ್ಲಿಗೆ ಲೈಟ್ ಬುಟ್ಟೊ. ಒಂದು ಮನುಷ್ಯಾಕೃತಿ ಗದ್ದೆಲಿ ನೀರಿಗೆ ಹಾರ್ದಂಗೆ ಸದ್ದ್ ಕೇಳ್ತ್. [ಟಾರ್ಚ್ ಲೈಟ್‌ಗೆ ಗುಳಿಗ ಹೆದ್ರ್‌ದೆತ ಜನ ಹೇಳುವೆ.] ಕೊಯಿಲೆ ಗೂಡೆ ನೈಟ

ಹಾಕಂಡ್ ಒಂದು ಥರಾ ಮಂರ್ ಹಿಡ್ದಂಗೆ ಬಂದದೆ. ಅತ್ತೆ ಓಡಿ ಹೋಗಿ ಮಗಳ ತಬ್ಬಿಕಂಡ್ "ಏನಾತವ್ವಾ, ಎಲ್ಲಿಗೆ ಹೋಗಿದವ್ವಾ"ತ ಕೇಳ್ತ್.

ಗೂಡೆ ಒಂದು ಥರಾ ದೆವ್ವ ಹಿಡ್ದಂಗೆ ಮಂಕಾಗಿತ್ತ್. "ಮಲ್ಗಿಕಾಕನ ತಲೆ ತಿರ್ಗಿದಂಗಾತ್, ಕಣ್ಣಿಗೆ ಅರ್ಸಿಣ ಬಣ್ಣದ ಬಟ್ಟೆ ಕಟ್ಟಿದಂಗಾತ್. ಮತ್ತೆ ಏನಾತ್‌ತ ನಂಗೆ ಗೊತ್ತ್‌ಲೆ ಅವ್ವ. ಈಗ ಟಾರ್ಚ್ ಬೆಳ್ಕ್ ಕಾಂಬಕನ ಎಚ್ಚರಾಗಿ ಇತ್ತ ಬಂದೆ"ಂತ ಹೇಳ್ತ್.

ಟಾರ್ಚ್ ಹಿಡ್ದ ಅಪ್ಪುಣಿ ಬಾವ "ಇದ್ ಎಂತನೆ ಕೊಯಿಲೆ ಬೆನ್ನ್‌ಲಿ, ಜಡೆಲಿ ಎಲ್ಲ ದರ್ಗ್ ಅಂಟಿಕಂಡುಟ್ಟಲೆ"ತ ಕೇಳ್ತ್. ಅದ್ಕೆ ಅತ್ತೆ "ಉಯಿ ನನ್ನ ಕೂಸು ಅಂಗಾತ ಬಿದ್ದ್‌ಬುಟ್ಟವ್ವಾ"ಂತ ಕೇಳ್ತ್. "ಇಲ್ಲೆವ್ವ, ನೀ ಬೆಳ್ಗೆ ಹಟ್ಟಿಗೆ ದರ್ಗ್ ತಾಕೆ ಹೇಳ್ಟಲ ಅದ್ ಅಂಟಿಕಂಡಿರಕೂ"ಂತ ಹೇಳ್ತ್. ಆಗ ಅಪ್ಪುಣು ಬಾವ "ಅಲ್ಲನೆ, ನೀ ಬೆಳ್ಗೆ ಲಂಗ ಬ್ಲೌಸ್ ಹಾಕಂಡ್ ದರ್ಗ್‌ಗೆ ಹೋದದರ ನಾ ನೋಡ್ಡೆ. ಅದ್ ಈ ನೈಟಿಗೆ ಹೇಂಗೆ ಅಂಟಿದೆ"ಂತ ಪಾಟಿಸವಾಲ್ ಹಾಕಿತ್. "ನಾನ್ ಮಿಯಕೆ ಹೋಕನ ಲಂಗ ಬಿಚ್ಚಿ ನೈಟಿ ಮೇಲೆ ಹಾಕಿದ್ದೆ, ಅದ್ ಅಂಟಿರಕು"ಂತ ಜವಾಬ್ ಹೇಳ್ತ್.

"ಮೀದವಳ ಜಡೆಲಿ ದರ್ಗ್ ಹೆಂಗೆ ಇದ್ದದೆ? ತಲೆ ಬ್ಯಾರೆ ಬಾಚಿಯೊಳ"ಂತ ಮತ್ತೊಂದು ಸವಾಲ್ ಹಾಕಿತ್. "ನಾನ್ ಇಂದ್ ತಲೆಗೆ ಮೀತ್ಲೆ"ಂತ ಹೇಳ್ತ್. ದೊಡ್ಡ ಮನೆವು ಇಬ್ಬರು ಒಂದು ಥರಾ ಹುಳಿ ಮಾಯಿನಕಾಯಿ ಕಚ್ಚಿದಂಗೆ ಮೊಖ ಮಾಡಿಕಂಡ್ ಹೋದೊ.

ಅತ್ತೆ ಗೂಡುಂದ ಒಂದು ಲಾಕಿನ ಹಿಡ್ಡ್ ಮಗ್ಳ ತಲೆಗೆ ಸುತ್ತ್ ತಂದ್ ಗುಳಿಗಂಗೆ ಹರ್ಕೆ ಬುಟ್ಟಿತ್. ನಾನೂ ಅಲ್ಲೆ ಮಲ್ಗಿದೆ ಮಾರ್ನೆ ದಿನ ಬೆಳ್ಗೆ ಎದ್ದ್ ಮನೆಗೆ ಬಾಕನ ಆ ಹಲ್ಸಿನ ಮರ್ದ ಬುಡದ ಕಡೆ ನೋಡ್ದೆ. ಏನೋ ಪಳಪಳ ಹೊಳ್ದದೆ. ಹತ್ರ ಹೋಗಿ ನೋಡ್ದೆ. ಒಂದು ಹೊಸ ಎವರೆಡಿ ಲೈಟ್ ಮತ್ತೆ ಒಂದು ಕಟ್ಟ್‌ಬೀಡಿ, ಬೆಂಕಿಪೊಟ್ಣ ಬಿದ್ದುಟು. ತಕಂಡ್ ಗದ್ದೆ ಕಡೆ ನೋಡ್ಡೆ. ಹಂದಿ ಪಳ್ಳ ಬಿದ್ದಂಗೆ ನಾಟಿ ಬೊಗ್ಗಿತ್ತ್. ಗದ್ದೆ ಒಳಗೆ ಹೆಜ್ಜೆ ಕಂಡದೆ. ಸ್ವಲ್ಪ ಇತ್ತ ಬಾಕನ ಆಚೆ ಮನೆ ಚಾಮಿ ಬಂದದೆ. ಸುರಾಲೆಲ್ಲ. ಕೆಸ್ರ್ ಬಡ್ಡ್ ಈಗಿನ ಎರ್ಡ್ ರೂಪಾಯಿ ನೋಟ್‌ನಂಗೆ ಆವುಟು. 'ಎಲ್ಲಿಗೆರಾ' ತ ಕೇಳ್ದೆ.

"ನಿನ್ನೆ ರಾತ್ರಿ ನನ್ನ ಟಾರ್ಚ್ ಎಲ್ಲೊ ಬಿದ್ದೋತು. ಅದ್ರ ಹುಡ್ಕಿಕೆ ಹೊರ್ಟೆ"ಂತ ಹೇಳ್ತ್. ಹುಡ್ಕಿಕಂಡ್ ಬಾ, ನಾ ಹೋನೆ"ಂತ ಬಂದೆ. ಟಾರ್ಚ್ ನಂಗೆ ದಕ್ಕಿತ್.

ವರ್ಸೋಳು ಗುಳಿಗಂಗೆ ಕೊಡದಿದ್ದರೆ ಉಪದ್ರ ಹಿಂಗೆ ಆದು ಗೊತ್ತುಟಾ?

**● ಬಾಚರಣಿಯಂಡ ಅಪ್ಪಣ್ಣ**
ಕುಶಾಲನಗರ

## ಬಾಂಬ್

ಏನಾರ್ ದೊಡ್ಡ ಸುದ್ಧಿನ ಹೇಳ್ಕನ 'ಬಾಂಬ್' ಸಿಡಿತಿತ್ತ್‌ತೇಳ್ವೆ. ಆದ್ರೆ ಮೊನ್ನೆ ಮೊನ್ನೆ ಭಾರತ ದೇಶ ಸಿಡ್ಸಿದ ಅಣು ಬಾಂಬ್‌ಗ ಮಾತ್ರ ಮಾಡ್ದ ಸುದ್ಧಿ ಇಲ್ಲಿಗಂಟ ಯಾವ ಬಾಂಬ್‌ಗಸನ ಮಾಡ್ತ್‌ಲೆ.

ನಮ್ಮ ದೇಶ ಯಾವ್ದೋ ದೇಶದ ಮ್ಯಾಲೆ ಬಾಂಬ್ ಹಾಕಿಯೇಬುಡ್ತ್‌ತೇಳ್ವಷ್ಟರ ಮಟ್ಟಿಗೆ ಸ್ವಲ್ಪ ದೇಶಗ ಹಾರಾಡ್ದೊ. ನಮ್ಮ ವಿಜ್ಞಾನಿಗ ಅದರ್ನ ಎಷ್ಟ್ ಲಾಯ್ಕ್‌ಲಿ ನಡ್ಸಿದೋಂತೇಳ್ರೆ ಅಮೇರಿಕಕ್ಕೆ ಸನ ಅದ್ರ ಪತ್ತೆ, ಬಾಂಬ್ ಸಿಡ್ದ ಮ್ಯಾಲೆ ಅಷ್ಟೆ ಗೊತ್ತಾತ್. ಭಾರತಕ್ಕೆ ಇಷ್ಟ್ ಶಕ್ತಿ ಉಟ್ಟ್‌ತೇಳಿ ಯಾವ ದೇಶನೂ ಗ್ಯಾನ ಮಾಡಿತ್ತ್‌ಲೆ.

ಅಣು ಬಾಂಬುಗಳ ಪರೀಕ್ಷೆ ಇಲ್ಲಿಗಂಟ ಎಷ್ಟೊ ದೇಶಗ ಮಾಡಿಟ್ಟ್. ಆಗ ಯಾರೂ ಚೀಕಾರ ಎತ್ತಿತ್ಲೆ. ವ್ಯಾಪಾರ ನಿಷೇಧ ಹೇರ್‌ತ್ಲೆ. ಬರೀ 3 ತಿಂಗ ಹಿಂದೆಷ್ಟೆ ಚೀನಾ ಇಂಥ ಪರೀಕ್ಷೆ ನಡ್ಸಿತ್ತ್. ಭಾರತ ಈ ಬಾಂಬ್‌ಗಳ್ನ ಖುಷಿಗೆತೇಳಿ ಇಲ್ಲೆ ಇನ್ನೊಂದು ಬಡದೇಶನ ಹೆದ್ರಿಸಿಕೆತೇಳಿ ಈ ಪರೀಕ್ಷೆ ಮಾಡ್ತ್‌ಲೆ. ಅದ್ ತನ್ನನ್ನ ರಕ್ಷಿಸಿಕಂಬಕೆ ಮಾತ್ರ ಈ ಕೆಲ್ಸನ ಮಾಡ್ತ್. ಅಲ್ಲ ನೋಡ್ರೆ ಚೀನಾ ಅದ್ರ ಎಲ್ಲಾ ಮಿಲ್ಟ್ರಿಪಡೆಗಳ್ನ ಟಿಬೇಟ್‌ಲಿ ನಿಲ್ಸಿಟ್ಟ್. ಪಾಕಿಸ್ತಾನಕ್ಕೆ ಕ್ಷಿಪಣಿಗಳ್ನ ಕಳ್ಸಿಕೊಡ್ತುಟ್ಟ್. ಪಾಕಿಸ್ತಾನ ಕ್ರಿಕೆಟ್ ಗೆದ್ದಂಗೆ ಯುದ್ಧಲಿ ಗೆಲ್ಲುವ ಕನ್ಸ್ ಕಾಣ್ತುಟ್ಟ್. ಅಮೇರಿಕ ಮತ್ತೆ ಕೆಲವು ದೇಶಕ್ಕೆ ಬೇಕಾದಂಗೆ ಸಿಟಿಬಿಟಿ ಮಾಡಿಕಂಡೊಳೊ. ಈಗ ಅಣುಬಾಂಬು ಪರೀಕ್ಷೆ ನಡ್ಸಿದ ಮೇಲೆ ಭಾರತಕ್ಕೆ ಸ ಅಮೇರಿಕದಷ್ಟೆ ಅಧಿಕಾರ ಸಿಟಿಬಿಟಿ ಲಿ ಸಿಕ್ಕಕು. ಇದ್ರ ಕೊಡಿಕೆ ಅಮೇರಿಕ ಸಿದ್ಧ ಇಲ್ಲೆ. ಅದ್ಕೆ ಈ ನಿಷೇಧ ಹೇರ್ವ್ ನಾಟಕ. ನಾನ್ ಹೇಳ್ದಂಗೆ ಇಡೀ ವಿಶ್ವ ಕೇಳಕೂತೇಳ್ವ ದುರಾಸೆ ಅಮೇರಿಕಕ್ಕೆ.

ಭಾರತಕ್ಕೆ ಈ ಬಾಂಬ್‌ಗಳಂದ ಬಾಳ ಉಪಯೋಗ ಆಗುಟ್ಟ್. ಅದ್ರ ಶಕ್ತಿ ವಿಶ್ವಕ್ಕೆ ಗೊತ್ತಾತ್. ಸಿಟಿಬಿಟಿ ಲಿ ಹಕ್ಕ್ ಚಲಾಯ್ಸಿಕೆ ಸಾಧ್ಯ ಆತ್. ವ್ಯಾಪಾರಲಿ ಅಮೇರಿಕ ನಿಷೇಧ ಹೇರ್‌ದಾರ್‌ಂದ ನಮ್ಮ ದೇಶದವು ಸ್ವಾವಲಂಬಿಗಾಕೆ ಪ್ರೇರಣೆ ಸಿಕ್ತ್. ಪಾಕಿಸ್ತನದ ಝಂಗಾಬಲ, ಮನೋಬಲ ಅಡಿಗಿ ಹೋತು.

ಪಾಕಿಸ್ತಾನ ಸರ್ಕಾರ ಬಾಂಬ್ ಪರೀಕ್ಷೆ ಮಾಡ್ರು ಕಷ್ಟ, ಮಾಡದಿದ್ರು ಕಷ್ಟಆಗಿತ್ತ್. ಪರೀಕ್ಷೆ ಮಾಡ್ರೆ ಎಲ್ಲಿ ತನ್ನ ಬಣ್ಣ ಬಯಲಾದೆ, ಎಲ್ಲಿ ತನ್ನ ಬೂರ್ನಾಸ್ ತಂತ್ರಜ್ಞಾನ ನೋಡಿ ಜನ ನೆಗಾಡ್ವೆತೇಳಿ ಆಗಿತ್ತ್. ಹಟಕ್ಕೆ ಪರೀಕ್ಷೆ ಮಾಡೆಬುಡ್ತ್.

ಒಟ್ಟಾರೆ ಹೇಳ್ಕುತೇಳ್ರೆ ಈ ಮಹಾನ್ ನಿರ್ಧಾರದ ಸಾವಿರಗಟ್ಲೆ ಭಾಷಣಗಳ್‌ಂದ ಜನಗಳ್ಲಿ ಒಗ್ಗಟ್ಟ್ ಉಂಟುಮಾಡಿಕೆ ಆಗದೆ ಇದ್ದ ಕೆಲ್ಸನ ಈ 5 ಬಾಂಬ್‌ಗ ಮಾಡಿಟ್ಟ್.

**● ಉಳುವಾರನ ಸುರೇಶ್‌ಕುಮಾರ್, ನಿಪ್ಪಾಣಿ.**

K.R.N.N. 240

ನೀವು ಪತ್ರಿಕೆ ಪ್ರಾರಂಭಿಸಿ ನಮ್ಮ ಜನಾಂಗಕ್ಕೆ ಕೀರ್ತಿಯನ್ನು ತಂದಿದ್ದೀರಿ.
ನಿಮಗೂ ಮತ್ತು ಬಳಗಕ್ಕೂ ದೇವರ ಆಶೀರ್ವಾದವಿರಲಿ.
ಧೈರ್ಯ ಮತ್ತು ದೈವ ಪ್ರೇರಣೆಯಿಂದ ಹೊರಬಂದ
ಈ ಪತ್ರಿಕೆಗೆ ಜನಾಂಗದ ಪ್ರತಿಯೊಬ್ಬರ ಅನುಕಂಪವಿರಲೆಂದು
ಹಾರೈಸುವ :



ಯಿಂದ,

ಆಜಡ್ಕ ಸೀತಮ್ಮ ಪೂವಯ್ಯ
ಕಾಫಿ ಬೆಳೆಗಾರರು
ಅತ್ತೂರು ನೆಲ್ಲೂರು ಗ್ರಾಮ ಮತ್ತು ಅಂಚೆ
ಸುಂಟಿಕೊಪ್ಪ, ಕೊಡಗು
ದೂರವಾಣಿ : (08276) 63252

Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-12 Published at Mysore. Editor PATTADA P. SHEELAMANI, No. 35, 1st Cross, 4th Block (Near Divisional Telephone Office) Jayalakshmipuram, Mysore-570 012 Phone : 516771